# ಕನ್ನಡ ನಾಡು, ನುಡಿಯು ಇತಿಹಾಸ ಭವ್ಯ
# ಅದರ ಪುನರುತ್ಥಾನಕ್ಕೆ ನಮ್ಮ ಯೋಜನೆಗಳು

ಕರ್ನಾಟಕ ತನ್ನದೇ ಆದ ಭವ್ಯ ಪರಂಪರೆಯನ್ನು ಹೊಂದಿದೆ. ಈ ಪರಂಪರೆಯನ್ನು ಉಳಿಸಿ, ಬೆಳೆಸಿ, ಕನ್ನಡ ಭಾಷೆಯನ್ನು ಅಭಿವೃದ್ಧಿಗೊಳಿಸಲು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಎರಡು ಪ್ರಮುಖ ಯೋಜನೆಗಳನ್ನು ಹಮ್ಮಿಕೊಂಡಿದೆ.

**ಕನ್ನಡ ಅಭಿವೃದ್ಧಿ :**

ಈ ಯೋಜನೆಯಡಿ ತರಬೇತಿ ಶಿಬಿರಗಳು ಭಾಷಾಂತರ ಮತ್ತು ಪ್ರಕಟಣೆಗಳು ಹಾಗೂ ಇತರ ಪ್ರೋತ್ಸಾಹಕ ಯೋಜನೆಗಳನ್ನು ಹಮ್ಮಿಕೊಂಡಿದ್ದು, ಈ ಮೂಲಕ ರಾಜ್ಯದ ಶಾಸಕಾಂಗ, ನ್ಯಾಯಾಂಗ ಮತ್ತು ಕಾರ್ಯಾಂಗದ ಎಲ್ಲ ಅಧಿಕಾರಿಗಳು ಮತ್ತು ನೌಕರರಿಗೆ ಆಡಳಿತ ಕನ್ನಡದಲ್ಲಿ ತರಬೇತಿ, ಎಲ್ಲ ಇಲಾಖೆಗಳ ಪಾರಿಭಾಷಿಕ ಶಬ್ದಕೋಶಗಳ ರಚನೆ, ಪರಿಷ್ಕರಣ ಹಾಗೂ ಅನುವಾದ, ಕನ್ನಡ ಬೆರಳಚ್ಚುಗಾರರು ಮತ್ತು ಶೀಘ್ರಲಿಪಿಗಾರರಿಗೆ ಪ್ರೋತ್ಸಾಹ, ಧನಸಹಾಯ ಮತ್ತು ಕನ್ನಡ ಮಾಧ್ಯಮದ ವಿದ್ಯಾರ್ಥಿಗಳಿಗೆ ಕೆಲಹಂತದಲ್ಲಿ ವಿದ್ಯಾರ್ಥಿವೇತನ ನೀಡಿಕೆ ಮುಂತಾದ ಕಾರ್ಯಕ್ರಮಗಳು.

**ಸಾಹಿತ್ಯ ಮತ್ತು ಸಂಸ್ಕೃತಿ ಚಟುವಟಿಕೆಗಳು :**

ರಾಜ್ಯದಲ್ಲಿ ಸಾಹಿತ್ಯ, ನಾಟಕ, ಲಲಿತಕಲೆ, ಸಂಗೀತ, ನೃತ್ಯ, ಜಾನಪದ ಯಕ್ಷಗಾನ ಮತ್ತು ಉರ್ದು ಅಕಾಡೆಮಿಗಳು ಸ್ಥಾಪಿತಗೊಂಡಿವೆ. ಇವುಗಳ ಮೂಲಕ ಸಾಹಿತಿಗಳು ಕಲಾವಿದರಿಗೆ ಸೂಕ್ತ ಪ್ರೋತ್ಸಾಹ; ರಾಜ್ಯದ ಹೊರಗಡೆಯೂ ತಮ್ಮ ಪ್ರತಿಭೆ ತೋರಲು ಎಲ್ಲ ಅವಕಾಶ ಮತ್ತು ಪ್ರೋತ್ಸಾಹ; ಪುಸ್ತಕಗಳ ಪ್ರಕಟಣೆ ಸಾಹಿತ್ಯ ಮತ್ತು ಸಂಸ್ಕೃತಿಗೆ ಸಂಬಂಧಿಸಿದಂತೆ ವಿಚಾರ ಸಂಕಿರಣಗಳು ಲೇಖಕರಿಗೆ ಪ್ರಶಸ್ತಿ, ನೀಡಿಕೆ, ಮಾಸಾಶನ ಮತ್ತು ಗೌರವಧನ ನೀಡಿಕೆ, ಲೇಖಕರು ಮತ್ತು ಕಲಾವಿದರ ವಿಶೇಷ ಜ್ಞಾನಾರ್ಜನೆಗಾಗಿ ಪ್ರವಾಸಾನುದಾನ, ವೈದ್ಯಕೀಯ ನೆರವು, ಹೊರನಾಡಿನ ಕನ್ನಡ ಸಂಘ ಸಂಸ್ಥೆಗಳ ಚಟುವಟಿಕೆಗಳಿಗೆ ಸಹಾಯಧನ, ರಂಗತರಬೇತಿ ಕಾರ್ಯಕ್ರಮ, ತರಬೇತಿ ಶಿಬಿರಗಳು, ಗ್ರಂಥ ಭಂಡಾರಗಳಿಗೆ ಸಹಾಯಧನ ನೀಡಿಕೆ, ಮುಂತಾದ ಕಾರ್ಯಕ್ರಮಗಳು. ಇಷ್ಟೇ ಸಾಲದೆಂಬಂತೆ ಕನ್ನಡ ಸಾಂಸ್ಕೃತಿಕ ಚಟುವಟಿಕೆಗಳ ಕೇಂದ್ರಸ್ಥಾನವಾಗಿ ಬೆಂಗಳೂರಿನಲ್ಲಿ ರವೀಂದ್ರ ಕಲಾಕ್ಷೇತ್ರ ಜಿಲ್ಲಾ ಮತ್ತು ತಾಲ್ಲೂಕು ಕೇಂದ್ರಗಳಲ್ಲಿ ರಂಗಮಂದಿರಗಳು.

ಈ ಎಲ್ಲ ಕಾರ್ಯಕ್ರಮಗಳಿಂದಾಗಿ ಕನ್ನಡ ಭಾಷೆ ಮತ್ತು ನಾಡಿನ ಭವ್ಯ
ಪರಂಪರೆಯ ಪುನರ್ ನಿರ್ಮಾಣವಾಗುತ್ತಲಿದೆ.

ಬಿ. ಎಂ. ಶ್ರೀ ಜನ್ಮಶತಮಾನೋತ್ಸವ

# ಶ್ರೀಗಂಧ

ಸಂಸ್ಮರಣ ಸಂಚಿಕೆ

ಸಂಪಾದಕರು

ಜಿ. ಶ್ರೀನಿವಾಸರಾಜು
ಜಿ. ಎಸ್. ವೆಂಕಟರಾಜು
ಕೆ. ಎಂ. ಮುನಿಕೃಷ್ಣಪ್ಪ
ಪ್ರಕಾಶ್ ಕಂಬತ್ತಹಳ್ಳಿ




ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ
54, 'ಅರವಿಂದ' 3ನೆ ಕ್ರಾಸ್, ಗವೀಪುರಂ ಬಡಾವಣೆ
ಬೆಂಗಳೂರು-560 019

SRIGANDA : B. M. Sri Memorial Souvenir Ed.
C. Srinivasaraju, G. S. Venkataraju,
K. M. Munikrishnappa & Prakash Kambathahalli,
Published by B. M. Sri Memorial Foundation
54, 'Aravinda' 3rd Cross, Gavipuram Extn.
Bangalore-560 019, INDIA

First Impression : February 1985



ಮುಖಪುಟ ವಿನ್ಯಾಸ : ಜಿ. ಶ್ರೀನಿವಾಸಮೂರ್ತಿ,
ಸಿಯಸ್ಸಾರ್

ಬೆಲೆ : ಹತ್ತು ರೂಪಾಯಿ



ಸಲಹೆ – ಸಹಾಯ – ಸಹಕಾರ
ಎಚ್. ಎಸ್. ರಾಘವೇಂದ್ರರಾವ್
ಮುನಿಧರ್ಮಯ್ಯ
ಜಿ. ಶ್ರೀನಿವಾಸಮೂರ್ತಿ
ಕೆ. ವಿ. ಪಟವರ್ಧನ್
ಡಿ. ಆರ್. ವೆಂಕಟರಮಣ
ಎಸ್. ಎನ್.
ನಾ. ಗೀತಾಚಾರ್ಯ



ಮುದ್ರಕರು :
ನೇತ್ರಾ ಪ್ರಿಂಟರ್ಸ್, ಚಾಮರಾಜಪೇಟೆ
ಬೆಂಗಳೂರು-560 018

## ಉಪಕಾರ ಸ್ಮರಣೆ :

ತಮ್ಮ ಕಲಾಭಿರುಚಿ, ಔಚಿತ್ಯ ಪ್ರಜ್ಞೆಗಳನ್ನು ವಿನಿಯೋಗಿಸಿ "ಶ್ರೀಗಂಧ"ದ ನೆನಪಿನ ಕಂಪು ಚಿರಕಾಲ ಉಳಿಯುವಂತೆ ಶ್ರಮಿಸಿರುವ ಸಂಪಾದಕ ಚಿ. ಶ್ರೀನಿವಾಸರಾಜು ಅವರಿಗೆ–

"ಶ್ರೀಗಂಧ"ಕ್ಕೆ ಲೇಖನ ಕುಸುಮಾಂಜಲಿಯನ್ನು ಸಂಗಡಿಸಿದ ವಿದ್ವಾಂಸರಿಗೆ–

ಸಂದೇಶಗಳನ್ನು ಕಳಿಸಿ ಪ್ರತಿಷ್ಠಾನದ ಪ್ರಯತ್ನಗಳಿಗೆ ಶುಭ ಕೋರಿರುವ ಅಭಿಮಾನಶೀಲ ಮಹನೀಯರಿಗೆ–

"ಇಂಗ್ಲಿಷ್‌ಗೀತ"ಗಳ ಮೂಲ ಆಂಗ್ಲ ರಚನೆಗಳನ್ನು Golden Treasury ಮತ್ತು ಇತರ ಮೂಲಗಳಿಂದ ಆಯ್ದು ಸಂಕಲಿಸಿಕೊಟ್ಟ ಹೆಚ್. ಎಸ್. ರಾಘವೇಂದ್ರರಾವ್ ಮತ್ತು ಕೆ. ಎಂ. ಮುನಿಕೃಷ್ಣಪ್ಪ ಅವರುಗಳಿಗೆ

ಎಲ್ಲಕ್ಕಿಂತ ಮಿಗಿಲಾಗಿ ''ಶ್ರೀಗಂಧ''ದ ಪ್ರಕಟನೆ, ಪ್ರತಿಷ್ಠಾನಕ್ಕೆ ಆರ್ಥಿಕವಾಗಿ ಹೊರೆಯಾಗದಂತೆ ನೆರವು ನೀಡಿದ ಜಿ. ಎಸ್. ವೆಂಕಟರಾಜು (ಪ್ರತಿಷ್ಠಾನದ ಗೌರವ ಕಾರ್ಯದರ್ಶಿ) ಅವರಿಗೆ–

ಜಾಹಿರಾತುಗಳನ್ನು ನೀಡಿ ಸಹಕರಿಸಿರುವ ವಾಣಿಜ್ಯೋದ್ಯಮಿಗಳಿಗೆ, ಕಾರ್ಖಾನೆಗಳಿಗೆ, ಮುದ್ರಕರಿಗೆ, ಇತರರಿಗೆ–

'ಶ್ರೀಗಂಧ'ಕ್ಕೆ ನೇತ್ರಾನಂದವನ್ನು ಒದಗಿಸಿದ 'ನೇತ್ರಾ' ಪ್ರಿಂಟರ್ಸ್ ಅವರಿಗೆ– ಕಲಾವಿದರಿಗೆ, ಮುದ್ರಣಾಲಯದ ಸಿಬ್ಬಂದಿ ವರ್ಗಕ್ಕೆ

–ಬಿ. ಎಂ. ಶ್ರೀ ಪ್ರತಿಷ್ಠಾನದ ವಂದನೆಗಳು.

ಎಂ. ವಿ. ಸೀತಾರಾಮಯ್ಯ
ಸಂಸ್ಥಾಪಕ ಕಾರ್ಯದರ್ಶಿ

# ಪರಿವಿಡಿ

ಬಳಸಿ ಬಂದೆನು ಸುತ್ತ ಕನ್ನಡದ ನಾಡುಗಳ ಸಿರಿಯ ನೋಡುತ್ತ,
ತಾಯಡಿಯ ಹುಡಿಯ ತಲೆಗಾನುತ್ತ, ಹರಕೆಯ ಪವಿತ್ರಯಾತ್ರೆಯಲಿ.
ಏನು ಚೆಲುವಿನ ನಾಡು ! ಚೆಲುವು ಚೆಲ್ಲುವ ನಾಡು ! ಕನ್ನಡದ ನಾಡು !
ಏನು ಚಿನ್ನದ ನಾಡು ! ನಮ್ಮೊಲುಮೆಯಾ ನಾಡು ! ನಮ್ಮಿನಿಯ ನಾಡು !
ಕಾವೇರಿಯಿಂದಮಾ ಗೋದಾವರಿಯುವರೆಗೆ ಚಾಚಿರುವ ನಾಡು !
ಬಳಸಿದೆನು, ಸುತ್ತಿದೆನು, ಕಣ್ದಣಿಯ ನೋಡಿದೆನು, ಕುಣಿದು ಹಾಡಿದೆನು :

# ಸಂದೇಶಗಳು ಮತ್ತು ಪರಿಚಯ

ಮುಖ್ಯಮಂತ್ರಿಯವರ ಸಚಿವಾಲಯ

ರಾಮಕೃಷ್ಣ ಹೆಗಡೆ
ಮುಖ್ಯ ಮಂತ್ರಿಗಳು

ವಿಧಾನಸೌಧ

## ಸಂದೇಶ

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದವರು ಈ ತಿಂಗಳು ನಡೆಸಲಿರುವ ಬಿ. ಎಂ. ಶ್ರೀ ಜನ್ಮ ಶತಮಾನೋತ್ಸವ ವಿಷಯ ತಿಳಿದು ಮುಖ್ಯಮಂತ್ರಿ ಶ್ರೀ ರಾಮಕೃಷ್ಣ ಹೆಗಡೆ ಯವರು ಸಂತೋಷಗೊಂಡಿದ್ದಾರೆ.

ಈ ಸಂದರ್ಭದಲ್ಲಿ ಬಿಡುಗಡೆಯಾಗಲಿರುವ 'ಶ್ರೀಗಂಧ' ಸಂಸ್ಮರಣ ಸಂಚಿಕೆಯಲ್ಲಿ ಬಿ. ಎಂ. ಶ್ರೀಯವರ ಜೀವನ ಮತ್ತು ಸಾಹಿತ್ಯದ ಪರಿಚಯ ಲೇಖನಗಳಿದ್ದು ಸಂಗ್ರಹ ಯೋಗ್ಯವಾಗಿರಲೆಂದು ಆಶಿಸಿದ್ದಾರೆ.

ಸುಭಾಷ್ ಚಂದ್ರ ಖಿಂಟಿಲಿ
ಅಧೀನ ಕಾರ್ಯದರ್ಶಿ
(ಮುಖ್ಯಮಂತ್ರಿಗಳ ಪರವಾಗಿ)

ಕರ್ನಾಟಕ ಸರ್ಕಾರ

ಎಂ. ಚಂದ್ರಶೇಖರ್,
ಲೋಕೋಪಯೋಗಿ ಸಚಿವರು.

ವಿಧಾನಸೌಧ

## ಸಂದೇಶ

ನವೋದಯ ಯುಗಪ್ರವರ್ತಕ, ಆಚಾರ್ಯ, ಕನ್ನಡದ ಕಣ್ವ "ಶ್ರೀ", ಪ್ರೊಫೆಸರ್ ಬಿ. ಎಂ. ಶ್ರೀಕಂಠಯ್ಯನವರ ಜನ್ಮ ಶತಮಾನೋತ್ಸವ ಸಮಾರಂಭವನ್ನು ಆಚರಿಸುವ ಸಂದರ್ಭದಲ್ಲಿ "ಶ್ರೀಗಂಧ" ಎಂಬ ಸ್ಮರಣ ಸಂಚಿಕೆಯನ್ನು ಹೊರತರಲು ಬಿ. ಎಂ. ಶ್ರೀ ಪ್ರತಿಷ್ಠಾನ ನಿರ್ಧರಿಸುವ ವಿಚಾರ ತುಂಬಾ ಸ್ವಾಗತಾರ್ಹವಾದುದು ಹಾಗೂ ಅಭಿನಂದನೀಯವಾದುದು.

ಕನ್ನಡ ನಾಡು ನುಡಿಗಾಗಿ ಅವಿಶ್ರಾಂತವಾಗಿ ದುಡಿದು ತಮ್ಮ ಇಡೀ ಜೀವನವನ್ನೆ ಕನ್ನಡ ಸಾರಸ್ವತ ಲೋಕಕ್ಕೆ ಮುಡುಪಾಗಿಟ್ಟು ಕಣ್ಮರೆಯಾದ ಬಿ. ಎಂ. ಶ್ರೀ ಜನ್ಮ ಶತಮಾನೋತ್ಸವದ ಕಾರ್ಯಕ್ರಮ ರೂಪಿಸಿಕೊಂಡಿರುವುದು ಮೆಚ್ಚುವಂತಹದ್ದು. ಈ ಕಾರ್ಯಕ್ರಮದಿಂದ ಕನ್ನಡ ಜನತೆಯಲ್ಲಿ ಕನ್ನಡ ಮತ್ತು ಕನ್ನಡದ ಧೀಮಂತ ಸಾಹಿತಿಗಳ ಬಗ್ಗೆ ಅರಿವು ಅಭಿಮಾನಗಳು ಮೂಡಲೆಂದು ಹಾರೈಸಿ ಈ ಶುಭ ಸಂದರ್ಭದಲ್ಲಿ ನನ್ನ ಶುಭಾಶಯಗಳನ್ನು ಕೋರುತ್ತೇನೆ.

**ಎಂ. ಚಂದ್ರಶೇಖರ್**

ಕರ್ನಾಟಕ ಸರ್ಕಾರ

ವಿ. ಎಸ್. ಕೃಷ್ಣ ಅಯ್ಯರ್,
ನಗರಾಭಿವೃದ್ಧಿ ಸಚಿವರು

ವಿಧಾನಸೌಧ
ಬೆಂಗಳೂರು

## ಸಂದೇಶ

ಪೂಜ್ಯ ಶ್ರೀ ಸೀತಾರಾಮಯ್ಯನವರೆ,

ನವೋದಯ ಯುಗಪ್ರವರ್ತಕ ಆಚಾರ್ಯ, ಕನ್ನಡದ ಕಣ್ವ ಶ್ರೀ, ಪ್ರೊಫೆಸರ್ ಬಿ. ಎಂ. ಶ್ರೀಕಂಠಯ್ಯನವರ ಜನ್ಮ ಶತಮಾನೋತ್ಸವ ಸಂದರ್ಭದಲ್ಲಿ "ಶ್ರೀಗಂಧ" ಎಂಬ ಸಂಸ್ಮರಣ ಸಂಚಿಕೆಯನ್ನು ಹೊರತರಲು ಬಿ. ಎಂ. ಶ್ರೀ ಪ್ರತಿಷ್ಠಾನ ತೀರ್ಮಾನಿಸಿರುವುದನ್ನು ತಿಳಿದು ಬಹಳ ಸಂತೋಷವಾಯಿತು.

"ಶ್ರೀಗಂಧ" ಸಂಸ್ಮರಣ ಸಂಚಿಕೆಯು ಶ್ರೀ ಬಿ. ಎಂ. ಶ್ರೀಕಂಠಯ್ಯನವರ ನೆನಪುಗಳನ್ನು ಮರುಕಳಿಸುತ್ತದೆ ಎಂಬುದಾಗಿ ಆಶಿಸುತ್ತೇನೆ ಮತ್ತು ಸಂಸ್ಮರಣ ಸಂಚಿಕೆಯು ಉತ್ತಮವಾಗಿ ಮೂಡಿ ಬರಲೆಂದು ಹಾರೈಸುತ್ತೇನೆ.

ವಂದನೆಗಳೊಂದಿಗೆ,

ತಮ್ಮ ವಿಶ್ವಾಸಿ,
**ವಿ. ಎಸ್. ಕೃಷ್ಣ ಅಯ್ಯರ್**

**V. K. Gokak**
*Sri Sathya Sai*
*Institute of Higher Learning*
*(Deemed University)*
*Prasanta Nilayam, 515134 (A P) India*

## ಸಂದೇಶ

ಸಪ್ರೇಮ ವಂದನೆಗಳು.

ಶ್ರೀಯವರ ಸ್ಮರಣಾರ್ಥ "ಶ್ರೀಗಂಧ" ಎಂಬ ಸಂಸ್ಮರಣ ಸಂಚಿಕೆಯ ಹಂಚಿಕೆ ಹಾಕಿದ್ದೀರೆಂದು ತಿಳಿದು ಸಂತೋಷವಾಯಿತು. ಇದು ಓದುಗರಿಗೆ ಒಂದು ರಸದೂಟವಾಗುವುದರಲ್ಲಿ ಸಂಶಯವಿಲ್ಲ. ವಸ್ತು ಗೌರವವೇ ಆಗಿದೆ.

ಶ್ರೀಯವರ ಕೃತಿಗಳ ಅಭ್ಯಾಸದ ಜೊತೆಗೆ ಶ್ರೀಯವರ ಪ್ರಭಾವ ಸಮಕಾಲೀನ ಹಾಗೂ ಕಿರಿಯ ಸಾಹಿತಿಗಳ ಮೇಲೆ ಎಷ್ಟೊಂದಾಗಿ ಬಿದ್ದಿತ್ತು. ವ್ಯಕ್ತಿ–ವ್ಯಕ್ತಿಗಳ ನೆನಹುಗಳು, ಅಲ್ಲದೆ ಅವರ ಕೃತಿಗಳಲ್ಲಿ ಕಾಣಿಸಿಕೊಳ್ಳುವ ಉದಾಹರಣೆಗಳಿಂದ ಈ ವಿಷಯವನ್ನು ಪುಷ್ಟೀಕರಿಸಬಹುದು. ಇವತ್ತಿಲ್ಲ ನಾಳೆ ಈ ಅಭ್ಯಾಸ ಆಗಬೇಕಾದುದು ಅವಶ್ಯ.

ತಮ್ಮ ಕಾರ್ಯಕ್ಕೆ ಎಲ್ಲ ಯಶಸ್ಸಿರಲಿ.

ವಂದನೆಗಳು.
ವಿ. ಕೃ. ಗೋಕಾಕ್

## ಗುಲಬರ್ಗ ವಿಶ್ವವಿದ್ಯಾಲಯ

ಡಾ॥ ಹಾ. ಮಾ. ನಾಯಕ್
ಕುಲಪತಿ

ಗುಲಬರ್ಗ
585 106

ಪ್ರಿಯರಾದ ಶ್ರೀ ಎಂ. ವಿ. ಸೀತಾರಾಮಯ್ಯ ಅವರಲ್ಲಿ ವಿಜ್ಞಾಪನೆಗಳು.

ನಿಮ್ಮ 29-10-1984ನೇ ದಿನಾಂಕದ ಕಾಗದ ಬಂದಿದೆ. ಪ್ರೊ॥ ಬಿ. ಎಂ. ಶ್ರೀಕಂಠಯ್ಯನವರ ಜನ್ಮ ಶತಮಾನೋತ್ಸವ ಸಂದರ್ಭದಲ್ಲಿ "ಶ್ರೀಗಂಧ" ಎಂಬ/ಸಂಸ್ಮರಣ ಸಂಚಿಕೆ ಪ್ರಕಟವಾಗುತ್ತಿರುವುದು ಸಂತೋಷದ ಸಂಗತಿ.

ಪ್ರೊ॥ ಬಿ. ಎಂ. ಶ್ರೀಕಂಠಯ್ಯ ಅವರು ಈ ಶತಮಾನದ ಮಹಾ ಕನ್ನಡಿಗರಲ್ಲಿ ಒಬ್ಬರು. ಅವರು ಒಬ್ಬ ಯುಗ ಪ್ರವರ್ತಕರು. ಪ್ರಾತಃಸ್ಮರಣೀಯರು. ಅವರ ದುಡಿಮೆ ಮತ್ತು ದೂರದರ್ಶಿತ್ವದಿಂದಲೇ ಕನ್ನಡಕ್ಕೆ ಇಂದಿನ ಸ್ಥಾನಮಾನಗಳು ಲಭ್ಯವಾಗಿವೆ. ಅಂದಿನ ದಿನಗಳಲ್ಲಿ ಅವರು ಕನ್ನಡವನ್ನು ಎತ್ತಿಕೊಳ್ಳದಿದ್ದರೆ ಕನ್ನಡಕ್ಕೆ ಭವಿಷ್ಯವೇ ಇರುತ್ತಿರಲಿಲ್ಲ. ಪ್ರೊ॥ ಬಿ. ಎಂ. ಶ್ರೀಕಂಠಯ್ಯ ಅವರ ಸಿದ್ಧಾಂತವೇ ಕನ್ನಡ. ಅವರ ಬದುಕು ಕನ್ನಡದ ಅಭಿವೃದ್ಧಿಗೆ ಮೀಸಲಾದದ್ದು. ಜೊತೆಗೆ ಒಬ್ಬ ಸೃಜನಶೀಲ ಲೇಖಕರಾಗಿ ಅವರು ಒಂದು ಹೊಸ ಪರಂಪರೆಯನ್ನು ಸೃಷ್ಟಿಸಿದರು. ಅವರ ಹೆಸರು ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ ಶಾಶ್ವತವಾಗಿ ಇರುತ್ತದೆ. ಇಂಥವರನ್ನು ನೆನಪಿಸಿಕೊಳ್ಳುವುದು ಇಂಥವರ ಕೆಲಸಗಳಿಂದ ಸ್ಫೂರ್ತಿ ಪಡೆಯುವುದು ನಮ್ಮ ಪುಣ್ಯಗಳಲ್ಲಿ ಒಂದು. ನೀವು ಪ್ರಕಟಿಸುತ್ತಿರುವ "ಶ್ರೀಗಂಧ" ಇದಕ್ಕೆ ಅನುಗುಣವಾಗಿ ಇದೆ. ಕನ್ನಡ ನಾಡಿನಲ್ಲಿ "ಶ್ರೀಗಂಧ"ವ ಕಂಪು ಚಿಮ್ಮುತ್ತಿರಲಿ ; ಶ್ರೀಕಂಠಯ್ಯನವರ ನೆನಪು ಬತ್ತದಿರಲಿ.

ಆದರಗಳೊಡನೆ,

ನಿಮ್ಮ ವಿಶ್ವಾಸದ,
ಹಾ. ಮಾ. ನಾಯಕ್

## ಮಂಗಳೂರು ವಿಶ್ವವಿದ್ಯಾನಿಲಯ

ಪ್ರೊ|| ಬಿ. ಷೇಕ್‌ಅಲಿ
ಉಪಕುಲಪತಿ

ಲೈಟ್‌ಹೌಸ್‌ಹಿಲ್
ಮಂಗಳೂರು–575 003

# ಸಂದೇಶ

ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನದವರು ಬಿ. ಎಂ. ಶ್ರೀ ಶತಮಾನೋತ್ಸವ ಸಂದರ್ಭದಲ್ಲಿ ವಿಶೇಷ ಸ್ಮರಣ ಸಂಚಿಕೆಯನ್ನು ಹೊರತರುತ್ತಿರುವುದು ಶ್ಲಾಘನೀಯವಾದ ವಿಚಾರ. ಬಿ. ಎಂ. ಶ್ರೀಕಂಠಯ್ಯನವರು ಕನ್ನಡ ಏಳಿಗೆಗಾಗಿ ಅವಿರತವಾಗಿ ಶ್ರಮಿಸಿದವರು. ಭಾಷಣಗಳ ಮೂಲಕ ಕನ್ನಡಿಗರಲ್ಲಿ ಕನ್ನಡ ಜಾಗೃತಿಯನ್ನು ಉಂಟುಮಾಡಿದವರು. 'ಇಂಗ್ಲಿಷ್ ಗೀತಗಳು' ಕವನ ಸಂಕಲನದ ಮೂಲಕ ಕನ್ನಡ ನವೋದಯ ಕಾವ್ಯದ ನಾಂದಿಯನ್ನು ಹಾಡಿದವರು. ಪಾಶ್ಚಾತ್ಯ ದುರಂತ ನಾಟಕಗಳ ರೂಪವನ್ನು ಕನ್ನಡಕ್ಕೆ ತಂದವರು. ಕನ್ನಡ ನಾಡಿನಲ್ಲಿ ಕನ್ನಡಕ್ಕೆ ಉನ್ನತ ಸ್ಥಾನಮಾನ ದೊರಕಲು ಕಾರಣರಾದವರು. ಕನ್ನಡಿಗರಿಗೆ ಎಲ್ಲ ಕಾಲಕ್ಕೂ ಪ್ರಾತಃಸ್ಮರಣೀಯರಾದ ಬಿ. ಎಂ. ಶ್ರೀಕಂಠಯ್ಯನವರ ನೆನಪನ್ನು ಈ ಸಂಚಿಕೆ ಚಿರಕಾಲ ಉಳಿಸಲಿ ಎಂದು ಹಾರೈಸುತ್ತೇನೆ.

ಇಂತು
ಪ್ರೊ|| ಬಿ. ಷೇಕ್‌ಅಲಿ



# ಕರ್ನಾಟಕ ವಿಶ್ವವಿದ್ಯಾಲಯ

ಎಸ್. ಜಿ. ದೇಸಾಯಿ
ಕುಲಪತಿ

ಪಾರ್ವತಿನಗರ
ಧಾರವಾಡ–580 003

## ಸಂದೇಶ

ಬಿ. ಎಂ. ಶ್ರೀ ಪ್ರತಿಷ್ಠಾನ ಬೆಂಗಳೂರು, ಇದು ಬಿ. ಎಂ. ಶ್ರೀಯವರ ಜನ್ಮ ಶತಮಾನೋತ್ಸವವನ್ನು ಜನವರಿ 3, 1984ರಿಂದ ಜನವರಿ 3, 1985ರ ವರೆಗೆ ಆಚರಿಸುತ್ತಿರುವುದನ್ನು ತಿಳಿದು ತುಂಬಾ ಸಂತೋಷಗೊಂಡಿದ್ದೇನೆ. ಕನ್ನಡ ನಾಡು ನುಡಿಗಳ ಏಳಿಗೆಗೆ ದುಡಿದ, ಕನ್ನಡದ ಕಣ್ವ ಎಂದು ಹೆಸರಾದ, ಬಿ. ಎಂ. ಶ್ರೀಕಂಠಯ್ಯನವರು ಕನ್ನಡ ಸಾಹಿತ್ಯಕ್ಕೆ ತಮ್ಮ ಜೀವನಾವಧಿಯಲ್ಲಿ ಅಮೋಘವಾದ ಸೇವೆಯನ್ನು ಸಲ್ಲಿಸಿದ್ದಾರೆ. ಹಾಗೂ ತಮ್ಮ ಸಾಹಿತ್ಯ ಸೇವೆ ಮತ್ತು ಇನ್ನಿತರ ಸಂಘಟನೆಗಳ ಮೂಲಕ ಕನ್ನಡ ನಾಡಿನ ಜನರ ಮೆಚ್ಚುಗೆಗೆ ಪಾತ್ರರಾಗಿದ್ದಾರೆ. ಬಿ. ಎಂ. ಶ್ರೀ ಪ್ರತಿಷ್ಠಾನ ಸಂಸ್ಥಾಪನೆ ಅವರ ದಿವ್ಯ ವ್ಯಕ್ತಿತ್ವಕ್ಕೆ ಹಿಡಿದ ಕೈಗನ್ನಡಿಯಾಗಿದೆ. ಈ ಶತಮಾನೋತ್ಸವದ ಅಂಗವಾಗಿ ಬಿ. ಎಂ. ಶ್ರೀಯವರ ವ್ಯಕ್ತಿತ್ವ, ಜೀವನ ಸಾಧನೆಗಳನ್ನು ಕುರಿತ ವಿದ್ವತ್ಪೂರ್ಣವಾದ ಸಂಪುಟಗಳನ್ನು ಕನ್ನಡ ಹಾಗೂ ಇಂಗ್ಲೀಷಿನಲ್ಲಿ ಪ್ರಕಟಿಸುತ್ತಿರುವುದು ಇನ್ನೂ ಸಂತೋಷದ ಸಂಗತಿ. ಇದೇ ರೀತಿ ಬಿ. ಎಂ. ಶ್ರೀ ಪ್ರತಿಷ್ಠಾನ ನಾಡಿನ ಎಲ್ಲ ಜನರ ಏಳಿಗೆಗಾಗಿ ಶ್ರಮಿಸಲಿ ಎಲ್ಲ ಜನರ ಮೆಚ್ಚುಗೆಯನ್ನು ಪಡೆಯಲಿ ಎಂದು ಭಗವಂತನನ್ನು ಪ್ರಾರ್ಥಿಸುತ್ತೇನೆ.

ಎಸ್. ಜಿ. ದೇಸಾಯಿ

ಡಿ. ವೀರೇಂದ್ರ ಹೆಗ್ಗಡೆಯವರು

ಧರ್ಮಸ್ಥಳ–574 216
ಕರ್ನಾಟಕ

# ಸಂದೇಶ

ಶ್ರೀ ಎಂ. ವಿ. ಸೀತಾರಾಮಯ್ಯನವರಿಗೆ,

ಕನ್ನಡ ನಾಡು ನುಡಿಗಳ ಏಳಿಗೆಗಾಗಿ ಸಾರ್ಥಕ ಸೇವೆಯನ್ನು ಸಲ್ಲಿಸಿದ ಶ್ರೀ ಬಿ. ಎಂ. ಶ್ರೀಕಂಠಯ್ಯನವರ ಜನ್ಮ ಶತಮಾನೋತ್ಸವ ಸಂದರ್ಭದಲ್ಲಿ ಸಂಸ್ಮರಣ ಸಂಚಿಕೆಯೊಂದನ್ನು ಬಿಡುಗಡೆಗೊಳಿಸುತ್ತಿರುವ ವಿಷಯ ಮಹತ್ವಪೂರ್ಣ ಹಾಗೂ ಸಂತೋಷದಾಯಕ.

ಪ್ರತಿಷ್ಠಾನ ಹಮ್ಮಿಕೊಂಡಿರುವ ಕಾರ್ಯಕ್ರಮಗಳು ನಿರ್ವಿಘ್ನವಾಗಿ ನೆರವೇರುವುದರೊಂದಿಗೆ "ಶ್ರೀಗಂಧ" ಸ್ಮರಣ ಸಂಚಿಕೆಯು ಬಿ. ಎಂ. ಶ್ರೀಯವರ ಜೀವನ ಸಿದ್ಧಿ ಸಾಧನೆಗಳ ಜೀವಂತ ಪ್ರತಿಬಿಂಬಿತ ಲೇಖನಗಳನ್ನೊಳಗೊಂಡು ಸಂಗ್ರಹಾತ್ಮಕ ಪುಸ್ತಕವಾಗಿ ಬಿಡುಗಡೆಯಾಗುವಂತೆ ಶ್ರೀ ಸ್ವಾಮಿಯ ಕೃಪಾಶೀರ್ವಾದವಿರಲೆಂದು ಹಾರೈಸುತ್ತೇನೆ.

ಇತಿ,
ಡಿ. ವೀರೇಂದ್ರ ಹೆಗ್ಗಡೆಯವರು

**ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು**
ಶ್ರೀ ಆದಿಚುಂಚನಗಿರಿ ಮಹಾ ಸಂಸ್ಥಾನ ಮಠ
ಶ್ರೀ ಆದಿಚುಂಚನಗಿರಿ ಕ್ಷೇತ್ರ 571 811 : ನಾಗಮಂಗಲ ತಾ : ಮಂಡ್ಯ ಜಿಲ್ಲೆ

## ಸಂದೇಶ

ಆಚಾರ್ಯ ಬಿ. ಎಂ. ಶ್ರೀಯವರ ಜನ್ಮ ಶತಮಾನೋತ್ಸವ ಸಮಿತಿ ವರ್ಷದಿಂದಲೂ ಹುಟ್ಟೂರಿನಿಂದ ಆರಂಭಿಸಿ ರಾಜ್ಯದ ಎಲ್ಲ ಕಡೆ ಜನ್ಮ ಶತಮಾನೋತ್ಸವಗಳನ್ನು ಆಚರಿಸುತ್ತಿರುವ ವಿಷಯ ತುಂಬಾ ಸಂತೋಷವನ್ನುಂಟುಮಾಡುತ್ತಿದೆ.

ಸರ್ವೋದಯ ಯುಗಪ್ರವರ್ತಕ, ಆಚಾರ್ಯ, ಕನ್ನಡದ ಕಣ್ವ ಇತ್ಯಾದಿ, ಬಿರುದಾಂಕಿತ ಪ್ರೊಫೆಸರ್ ಬಿ. ಎಂ. ಶ್ರೀರವರ ಹೆಸರಿನಲ್ಲಿ ಅಭಿಮಾನಿಗಳನ್ನು ಆಶ್ರಯಿಸಲಿರುವ "ಶ್ರೀಗಂಧ" ಸ್ಮರಣಗ್ರಂಥ ಸದಾ ಅವರನ್ನು ಸುಗಂಧಪೂರ್ಣ ಸಾಹಿತ್ಯ ಸಾರಸ್ವತ ಲೋಕದಲ್ಲಿ ವಿಹರಿಸುವಂತೆ ಮಾಡಲಿ ಎಂದು ತುಂಬು ಹೃದಯದಿಂದ ಹಾರೈಸುತ್ತೇನೆ.

ಇತಿ,

**ಶ್ರೀ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮಿಗಳು**

# ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ ಒಂದು ಪರಿಚಯ

**ನಾ. ಗೀತಾಚಾರ್ಯ**

1979 ಮೇ 6 ರಂದು 'ಶ್ರೀ'ಯವರ ಅಭಿಮಾನಿಗಳು ಮತ್ತು ಎಂ. ವಿ. ಸೀ. ಅವರ ಶಿಷ್ಯ–ಪ್ರಶಿಷ್ಯರ ಸಹಕಾರದಿಂದ ಹುಟ್ಟು ಹಾಕಿದ ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ (ಕನ್ನಡ ಸಾಹಿತ್ಯ–ಸಂಶೋಧನ ಸೇವಾ ಕೇಂದ್ರ), ಈಚೆಗೆ ತನ್ನ ಐದನೆಯ ಹುಟ್ಟುಹಬ್ಬವನ್ನು ಆಚರಿಸಿಕೊಂಡಿತು. ಈ ಐದು ವರ್ಷಗಳಲ್ಲಿ ತನ್ನ ಚಟುವಟಿಕೆಗಳಿಂದ ಒಂದು ಪ್ರತಿಷ್ಠಿತ ಸಂಶೋಧನಾ ಕೇಂದ್ರ ಎಂಬ ಹೆಸರನ್ನು ಪಡೆದುಕೊಂಡಿದೆ.

ಎಂ. ವಿ. ಸೀ.ಯವರ ಮನೆಯಲ್ಲೇ ಇದ್ದ, ತಮ್ಮ ತಾತ ಮುತ್ತಾತರಿಂದ ಬೇಡಿ ಬಂದಿದ್ದ ನೂರಾರು ಹಸ್ತಪ್ರತಿಗಳ ಬಗ್ಗೆ ವಿಚಾರ ಮಾಡುವ ಹೊತ್ತಿಗಾಗಲೆ ಅವರಲ್ಲಿ ಎಷ್ಟೋ ನಾಶವಾಗಿ ಹೋಗಿದ್ದವು. ಅವರೇ ಒಮ್ಮೆ ಹೇಳಿದ್ದ ಮಾತು ನೆನಪಿಗೆ ಬರುತ್ತದೆ. ಮನೆಯಲ್ಲಿ ಹುಡುಗರು ಒಂದೊಂದೇ ಗರಿಗಳನ್ನು ಕಟ್ಟಿನಿಂದ ಹಿರಿದುಕೊಂಡು ಅದನ್ನು ಪಟ್‌ಪಟ್ ಎಂದು ಪೈಪೋಟಿಯಲ್ಲಿ ಮುರಿಯುವ ಆಟ ಆಡುತ್ತಿದ್ದರಂತೆ, ಇನ್ನು ಮುಂದೆ ಹಾಗಾಗಲು ಬಿಡದೆ, ತಕ್ಷಣ ಮೈಸೂರಿನಿಂದ ಇರುವಷ್ಟನ್ನೆಲ್ಲ ಮೂಟೆ ಕಟ್ಟಿಕೊಂಡು ಬೆಂಗಳೂರಿನ ತಮ್ಮ ಮನೆಗೆ ತಂದು, ತಮ್ಮ ಶಿಷ್ಯರಾದ ಶ್ರೀ ಕೆ. ಆರ್.

ಗಣೇಶ, ಶ್ರೀ ವಿ. ವೆಂಕಟರಾವ್ ಅವರುಗಳ ಸಹಾಯದಿಂದ ಪ್ರತಿದಿನ ಕಟ್ಟುಗಳನ್ನೆಲ್ಲ ಬಿಡಿಸಿ, ಧೂಳು ಹೊಡೆದು ಗ್ರಂಥಗಳನ್ನಾಗಿ ವಿಂಗಡಿಸಿ ಮತ್ತೆ ಕಟ್ಟಿ ಇಟ್ಟರಂತೆ. ಅಷ್ಟಕ್ಕೇ ಎಂ. ವಿ. ಸೀ.ಯವರ ಆಸಕ್ತಿ ಕೊನೆಯಾಗಲಿಲ್ಲ. ಅವುಗಳನ್ನು ಏನಾದರೂ ಮಾಡಿ ಪ್ರಕಾಶಿಸಬೇಕು ಎಂದು ಯೋಚಿಸತೊಡಗಿದರು. ಬಹುಮಟ್ಟಿನ ಗ್ರಂಥಗಳೆಲ್ಲ ತಮ್ಮ ವಂಶಜರದೇ ಎಂದೂ ಅವರಿಗೆ ತಿಳಿಯಿತು. ಅದೇ ಶಿಷ್ಯರಿಂದ ಕೆಲವು ಹಸ್ತಪ್ರತಿಗಳನ್ನು ಪ್ರತಿ ಮಾಡಿಸಿ ತಿಮ್ಮಪ್ಪದಾಸರ ಪೂಜಾವಿಧಾನದ ಕೀರ್ತನೆಗಳನ್ನೆಲ್ಲ ಸಂಗ್ರಹಿಸಿ, ಸಂಪಾದಿಸಿ ಬೆಂಗಳೂರು ವಿಶ್ವವಿದ್ಯಾನಿಲಯದಿಂದ ಪ್ರಕಟಿಸುವಲ್ಲೂ ಯಶಸ್ವಿಯಾದರು. ಅಷ್ಟಕ್ಕೆ ಸಮಾಧಾನಗೊಳ್ಳದೆ ಇರುವ ಹಸ್ತಪ್ರತಿಗಳಿಗೆಲ್ಲ ಬೆಳಕು ಕಾಣಿಸಬೇಕೆಂದು ಆಲೋಚಿಸತೊಡಗಿದರು.

ಎಂ. ವಿ. ಸೀ.ಯವರು ನಾಡಿನ ಈ ಅಮೂಲ್ಯ ಹಸ್ತಪ್ರತಿ ಆಸ್ತಿಯ ಅಪಾರ ನಷ್ಟವನ್ನು ಏನಾದರೂ ಮಾಡಿ ತಪ್ಪಿಸಬೇಕೆಂದು, ಇದಕ್ಕೆ ಒಂದು ಮಾರ್ಗವನ್ನು ಕಂಡುಹಿಡಿಯಲೇ ಬೇಕು ಎಂದು, ಡಾ॥ ಎಂ. ಚಿದಾನಂದಮೂರ್ತಿ ಮುಂತಾದ ಮಿತ್ರ–ವಿದ್ವಾಂಸರೊಂದಿಗೆ ಆಗಾಗ್ಗೆ ಚರ್ಚಿಸುತ್ತಲೇ ಇದ್ದು ಈ ಬಗೆಯ ಕೆಲಸಕ್ಕೆ ಒಂದು ಪ್ರತ್ಯೇಕ ಸಂಸ್ಥೆಯ ಸ್ಥಾಪನೆಯೇ ಪರಿಹಾರವೆಂದು ನಿರ್ಧರಿಸಿ, ನಾಡಿನ ಪ್ರಮುಖ ವಿದ್ವಾಂಸರುಗಳಿಗೆ ಪತ್ರ ಬರೆದು ಅಭಿಪ್ರಾಯ ಪಡೆದರು. ತಾವು ನಿರೀಕ್ಷಿಸಿದ್ದಕ್ಕಿಂತ ಹೆಚ್ಚಿನ ಸಹಕಾರ, ಪ್ರೋತ್ಸಾಹ ಬಂದಿತು. ಶ್ರೀ ಎಸ್. ಆರ್. ಆರ್. ಕೆ. ಶರ್ಮ ಅವರ ಆರ್ಥಿಕ ಬೆಂಬಲ ಪ್ರೋತ್ಸಾಹದಿಂದ, ಎಂ. ವಿ. ಸೀಯವರ ಕಲ್ಪನೆಯ ಈ ಸಂಸ್ಥೆ, ಒಂದು Foundation–ಪ್ರತಿಷ್ಠಾನ ಆಯಿತು. ಆಚಾರ್ಯ ಬಿ. ಎಂ. ಶ್ರೀಯವರ ಹೆಸರೇ ಈ ಸಂಸ್ಥೆಗೆ ಯೋಗ್ಯವಾದದ್ದೆಂದು ಬಿ. ಎಂ. ಶ್ರೀ ಸ್ಮಾರಕ ಪ್ರತಿಷ್ಠಾನ ಎಂಬ ಹೆಸರನ್ನಿಟ್ಟು, ಅವರ ಪ್ರಥಮ ಶಿಷ್ಯರಾದ ರಾಷ್ಟ್ರಕವಿ ಕುವೆಂಪು ಅವರಿಂದ 10–3–1980ರಂದು ಸಂಸ್ಥೆಯನ್ನು ಅಧಿಕೃತವಾಗಿ ಉದ್ಘಾಟನೆ ಮಾಡಿಸಿದರು.

ಹಸ್ತಪ್ರತಿ ಶಾಸ್ತ್ರ, ಗ್ರಂಥ ಸಂಪಾದನಾಶಾಸ್ತ್ರ, ಶಬ್ದಶಾಸ್ತ್ರ, ನಿಘಂಟುಶಾಸ್ತ್ರ, ಭಾಷಾವಿಜ್ಞಾನ, ಧ್ವನಿ ವಿಜ್ಞಾನ, ಶಾಸನಶಾಸ್ತ್ರ, ಸಾಹಿತ್ಯ ವಿಮರ್ಶೆ, ಸಾಹಿತ್ಯಕ್ಕೂ, ಸಾಹಿತಿಗಳಿಗೂ ಸಂಬಂಧಪಟ್ಟ ಮೂಲಕನ್ನಡ ದಾಖಲೆಗಳ, ಪತ್ರಗಳ ಸಂಗ್ರಹ ಮತ್ತು ಸಂರಕ್ಷಣೆ, ಕರ್ನಾಟಕ ಸಂಗೀತಶಾಸ್ತ್ರ–ಈ ಜ್ಞಾನ ಶಾಖೆಗಳಲ್ಲಿ ಸಂಶೋಧನೆ ನಡೆಸುವುದು ಪ್ರತಿಷ್ಠಾನದ ಮುಖ್ಯ ಧ್ಯೇಯಗಳು. ಈ ಧ್ಯೇಯೋದ್ದೇಶಗಳನ್ನು ಕೇಳಿ-ತಿಳಿದ ನಾಡಿನ ಜನ ಮೂಲೆಮೂಲೆಗಳಿಂದ ಪ್ರೋತ್ಸಾಹದ, ಸಹಕಾರದ ಸುರಿಮಳೆಯನ್ನೇ ಸುರಿದರು. ಪೋಷಕರಾಗಿ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರರು, ಅಧ್ಯಕ್ಷರಾಗಿ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರು, ಕಾರ್ಯಸಮಿತಿ, ಸಲಹಾಮಂಡಲಿ, ಗೌರವ ಸದಸ್ಯರಾಗಿ ನಾಡಿನ ಹಿರಿಯ ಗಣ್ಯವಿದ್ವಾಂಸರುಗಳು ಇಂದಿನವರೆಗೂ ತುಂಬು ಮನಸ್ಸಿನಿಂದ ನೆರವಾಗುತ್ತಿದ್ದಾರೆ. ಶ್ರೀ ಕೆ. ಆರ್. ಗಣೇಶ್. ಶ್ರೀ ಕೆ. ಎಸ್. ಮಧುಸೂಧನ ಅವರುಗಳು ಕಾರ್ಯದರ್ಶಿಗಳಾಗಿಯೂ ; ಅವರೊಂದಿಗೆ ಡಾ॥ ಆರ್. ಶೇಷಶಾಸ್ತ್ರಿ, ದೇವರ ಕೊಂಡಾರೆಡ್ಡಿ, ವಿ. ವೆಂಕಟರಾವ್ ಅವರುಗಳು ಪ್ರತಿಷ್ಠಾನದ ಹುಟ್ಟಿಗೆ, ಬೆಳವಣಿಗೆಗೆ ಎಂ.ವಿ.ಸೀ ಅವರಿಗೆ ಹೆಗಲೆಣೆಯಾಗಿ ದುಡಿದಿದ್ದಾರೆ.

ಬಿ. ಎಂ. ಶ್ರೀಯವರ ಹೆಸರಿನಲ್ಲಿ ಉದಯವಾದ ಪ್ರತಿಷ್ಠಾನದ ಸುದ್ದಿಯನ್ನು ಕೇಳಿದ 'ಶ್ರೀ'ಯವರ ಸಂಬಂಧಿಕರಾದ ಶ್ರೀ ಎನ್. ಡಿ. ಎಸ್. ರಾವ್ ಅವರು ಬಹಳ ಸಂತೋಷದಿಂದ ಶ್ರೀಯವರ ಹೆಸರಿನಲ್ಲಿ ಪ್ರಥಮ ದತ್ತಿಯನ್ನು ಪ್ರತಿಷ್ಠಾನದಲ್ಲಿ ಸ್ಥಾಪಿಸಿದರಲ್ಲದೆ, ತಮ್ಮ ಮಕ್ಕಳುಗಳ ಹೆಸರಲ್ಲಿ ಸಾವಿರ ರೂಗಳ ದಾನವನ್ನು ನೀಡಿದರು. ತಮ್ಮ ತಂದೆ ಚಂದ್ರಶೇಖರಶರ್ಮರ ಹೆಸರಿನಲ್ಲಿ ಬಿ. ಎಂ. ಶ್ರೀಯವರ ಇನ್ನೊಬ್ಬ ಬಂಧುಗಳೂ, ಪ್ರಸಿದ್ಧ ನವ್ಯಕವಿಗಳೂ ಆದ ಶ್ರೀ ರಾಮಚಂದ್ರಶರ್ಮ ; ಪ್ರಸಿದ್ಧ ಇತಿಹಾಸ ಸಂಶೋಧಕರಾಗಿದ್ದ ತಮ್ಮ ತಂದೆ ಎಸ್. ಶ್ರೀಕಂಠಯ್ಯ ಅವರ ಹೆಸರಿನಲ್ಲಿ ಬಿ. ರಾಮಸ್ವಾಮಿ ಅವರ ನೆರವಿನಿಂದ ಎಸ್. ರಾಮಚಂದ್ರ ಅವರು ದತ್ತಿಗಳನ್ನು ಪ್ರತಿಷ್ಠಾನಕ್ಕೆ ನೀಡಿದ್ದಾರೆ. ಈಚೆಗೆ ಪ್ರಸಿದ್ಧ ಸಂಸ್ಕೃತಿ ಸಂಶೋಧಕರಾದ ಡಾ॥ ಶಂ. ಬಾ. ಜೋಶಿ ಸನ್ಮಾನ ಸಮಿತಿಯು ಅವರ ಹೆಸರಿನಲ್ಲಿ ಪ್ರತಿಷ್ಠಾನದಲ್ಲಿ ಶ್ರೀಯುತರಿಗೆ ಪ್ರಿಯವಾದ ಕ್ಷೇತ್ರದಲ್ಲಿ ಸಂಶೋಧನೆ ನಡೆಸುವವರಿಗೆ

ನೆರವು ನೀಡುವ ಸಲುವಾಗಿ ಒಂದು ನಿಧಿಯನ್ನು ಸ್ಥಾಪಿಸಿದೆ. ಇದಕ್ಕೆ ಜೋಶಿಯವರ ಮಕ್ಕಳು ಇನ್ನಷ್ಟು ಹಣವನ್ನು ಸೇರಿಸಿದ್ದಾರೆ. ಕನಿಷ್ಠ ತಿಂಗಳಿಗೆ ಒಂದು ದತ್ತಿ ಉಪನ್ಯಾಸವನ್ನು ನಡೆಸುವಂತೆ ಯೋಜಿಸಬೇಕೆಂಬ ಗುರಿ ಪ್ರತಿಷ್ಠಾನದ್ದು.

ಪ್ರತಿಷ್ಠಾನ ತನ್ನ ನಾಲ್ಕು ಹುಟ್ಟು ಹಬ್ಬಗಳನ್ನು ಬಹಳ ವೈಶಿಷ್ಟ್ಯಪೂರ್ಣವಾಗಿ ಆಚರಿಸಿದೆ. ಹಸ್ತಪ್ರತಿ ಶಾಸ್ತ್ರ ವಿಚಾರಗೋಷ್ಠಿಯನ್ನು ನಡೆಸುವುದರ ಮೂಲಕ ತನ್ನ ಮೊದಲನೇ ವರ್ಷವನ್ನು ದಾಟಿತು. ಕರ್ನಾಟಕದಲ್ಲೇ ಏಕೆ ಭಾರತದಲ್ಲೇ ಮೊತ್ತಮೊದಲ ಬಾರಿಗೆ ನಡೆದ ಹಸ್ತಪ್ರತಿ ಶಾಸ್ತ್ರವನ್ನು ಕುರಿತ ವಿಚಾರಗೋಷ್ಠಿ ಅದು.

ತಿಮ್ಮಪ್ಪದಾಸರ 'ಕೀರ್ತನ ಕುಸುಮಾಂಜಲಿ'ಯನ್ನು ಎಂ.ವಿ.ಸೀಯವರು ತಮ್ಮ ಖರ್ಚಿನಲ್ಲೇ ಪ್ರತಿಷ್ಠಾನದ ಹೆಸರಿನಲ್ಲಿ ಅಚ್ಚು ಹಾಕಿಸಿ ಪ್ರತಿಷ್ಠಾನಕ್ಕೆ ದಾನ ಮಾಡಿದರು. ತಮ್ಮಲ್ಲಿ ಮಾರಾಟವಾಗದೆ ಉಳಿದಿದ್ದ ತಮ್ಮ ಎಲ್ಲ ಪುಸ್ತಕಗಳನ್ನು ಪ್ರತಿಷ್ಠಾನಕ್ಕೆ ನೀಡಿದರು. ಇವುಗಳಿಂದ ಮಾರಾಟವಾದ ಹಣವನ್ನೆಲ್ಲ ಒಂದೇ ಕಡೆ ಸೇರಿಸಿ ಆ ಹಣದಿಂದಲೇ ಉಳಿದ ತಮ್ಮ ವಂಶಜರ ಅಪ್ರಕಟಿತ ಕೃತಿಗಳನ್ನು ಪ್ರಕಟಿಸಬೇಕೆಂದು 'ತಿಮ್ಮಪ್ಪದಾಸ ಪ್ರಕಾಶನ ನಿಧಿ'ಯನ್ನು ಪ್ರತಿಷ್ಠಾನದಲ್ಲಿ ಸ್ಥಾಪಿಸಿದರು.

ವಚನ ಪಿತಾಮಹ ಎನಿಸಿದ್ದ ಡಾ|| ಫ, ಗು. ಹಳಕಟ್ಟಿ ಅವರ ಜನ್ಮ ಶತಮಾನೋತ್ಸವದ ನೆನಪಿಗಾಗಿ 'ಮಣಿಹ' ಸಂಸ್ಮರಣ ಗ್ರಂಥವನ್ನು ಪ್ರಕಟಿಸುವುದರ ಮೂಲಕ ಪ್ರತಿಷ್ಠಾನ ತನ್ನ ಎರಡನೇ ವರ್ಷವನ್ನು ದಾಟಿತು. ಇದೇ ಸಂದರ್ಭದಲ್ಲಿ ನಮ್ಮನ್ನಗಲಿದ ವರಕವಿ ಡಾ|| ದ. ರಾ. ಬೇಂದ್ರೆಯವರನ್ನು ಸ್ಮರಿಸಿಕೊಳ್ಳುವ ಸಲುವಾಗಿ "ಬೇಂದ್ರೆ ಸ್ಮೃತಿ"ಯನ್ನು ಪ್ರಕಟಿಸಿತು.

ಇಷ್ಟೆಲ್ಲ ಸಾಧನೆಯನ್ನು ಇಷ್ಟು ಬೇಗ ಮಾಡಬೇಕಾದರೆ ಪ್ರತಿಷ್ಠಾನ ಆರ್ಥಿಕವಾಗಿ ದೃಢವಾಗಿಯೇ ಇರಬೇಕೆಂದು ಯಾರಿಗೂ ಅನ್ನಿಸದಿರದು. ಆದರೆ ಪ್ರತಿಷ್ಠಾನದ ಸ್ಥಿತಿಯೇ ಬೇರೆ. ಪ್ರತಿಷ್ಠಾನದ ಸದಸ್ಯರ ಸಂಖ್ಯೆ ಕೇವಲ 70. ಅದರಲ್ಲಿ ಅಜೀವ ಸದಸ್ಯತ್ವದ ಹಣವೆಲ್ಲ ಬ್ಯಾಂಕಿನಲ್ಲಿ ಠೇವಣಿಯಾಗಿ, ಉಳಿದ ಹಣ ಪತ್ರವ್ಯವಹಾರಕ್ಕೇ ಸಾಲುತ್ತಿರಲಿಲ್ಲ. ಮೊದಲೇ ಹೇಳಿದಂತೆ ಪ್ರತಿಷ್ಠಾನಕ್ಕೆ ತನ್ನದೇ ಆದ ಕಟ್ಟಡವಿರಲಿಲ್ಲ. ಎಂ.ವಿ.ಸೀಯವರ ಮನೆಯೇ ಅದರ ಕಾರ್ಯಾಲಯ. ಅವರಲ್ಲಿದ್ದ ಅಮೂಲ್ಯ ಗ್ರಂಥ ಭಂಡಾರ ಪ್ರತಿಷ್ಠಾನದ ಗ್ರಂಥ ಭಂಡಾರವಾಯಿತು.

ಈ ಸ್ಥಿತಿಯಲ್ಲಿ ಪ್ರತಿಷ್ಠಾನ ಇದ್ದಾಗ. ಕೇಂದ್ರ ಸರ್ಕಾರದಿಂದ ಹಸ್ತಪ್ರತಿ ಸಂಗ್ರಹ, ಸಂರಕ್ಷಣ-ಪ್ರಕಟನ ಯೋಜನೆಗೆ ಸ್ವತಂತ್ರ ಸಂಸ್ಥೆಗಳಿಗೆ ನೀಡುವ ಸಹಾಯ ಧನವನ್ನು, ದೆಹಲಿಯಲ್ಲಿರುವ ಎಚ್. ವೈ. ಶಾರದಾ ಪ್ರಸಾದ್ ಅವರ ಸಹಾಯದಿಂದ, ಪ್ರಧಾನಿ ಶ್ರೀಮತಿ ಇಂದಿರಾಗಾಂಧಿಯವರಿಂದ ಶಿಫಾರಸು ಪಡೆದು ಆ ಸಹಾಯಧನವನ್ನು ಪ್ರತಿಷ್ಠಾನ ಪಡೆಯಿತು. ಪ್ರತಿಷ್ಠಾನ ಯೋಜನೆಯನ್ನು ಯಶಸ್ವಿಯಾಗಿ ಕಾರ್ಯಗತಗೊಳಿಸಿ ತನ್ನ ಮೂರನೇ ವರ್ಷವನ್ನು ದಾಟಿತು. ಪ್ರತಿಷ್ಠಾನಕ್ಕೆ ಸ್ವಲ್ಪ ಆರ್ಥಿಕ ಸಹಾಯ ದೊರೆಯಿತು ಎಂದು ಸಂತೋಷವಾದರೆ ಹಣ ಬಂದ ಮೇಲೆ ವಾಸ್ತವವಾಗಿ ಮೊದಲಿಗಿಂತ ಹೆಚ್ಚಿನ ಬೇಗುದಿಯಲ್ಲಿ ಪ್ರತಿಷ್ಠಾನ ಸಿಕ್ಕಿತು. 'ಸರ್ವಜ್ಞ ವಚನಗಳು', 'ಸೂತ ಭಾರತ', 'ಶ್ರೀ ಕೃಷ್ಣದೇವರಾಯ ದಿನಚರಿ' ಮತ್ತು 'ಧ್ರುವ ಚರಿತ್ರೆ' ಎಂಬ ನಾಲ್ಕು ಅಪ್ರಕಟಿತ ಗ್ರಂಥಗಳು ಈ ಯೋಜನೆಯಲ್ಲಿ ಪ್ರಕಟವಾದವು. ಈವರೆಗೆ ಆಗಿದ್ದ ದತ್ತಿ ಉಪನ್ಯಾಸಗಳನ್ನು ಸೇರಿಸಿ 'ಮೂರು ದತ್ತಿ ಉಪನ್ಯಾಸಗಳು' ಎಂಬ ಪುಸ್ತಕವನ್ನು ಪ್ರಕಟಿಸಲಾಯಿತು.

ಪ್ರತಿಷ್ಠಾನ ತನ್ನ ಸದಸ್ಯರೊಂದಿಗೆ ನಿಕಟ ಸಂಪರ್ಕವನ್ನಿಟ್ಟುಕೊಳ್ಳುವ ಸಲುವಾಗಿ "ಲೋಚನ" ಎಂಬ ವಿದ್ವತ್ ಪತ್ರಿಕೆಯನ್ನು ಪ್ರಕಟಿಸಲು ಪ್ರಾರಂಭಿಸಿತು. ಮೊದಲ ಸಂಚಿಕೆ 1983 ಜೂನ್‌ನಲ್ಲಿ ಬಂತು. ಕೇವಲ ಸಂಶೋಧನೆ, ಸಂಪಾದನೆಗೆ ಮಾತ್ರ ಇದು ಮೀಸಲು. ಈವರೆಗೆ ಮೂರು ಸಂಚಿಕೆಗಳು ಬಂದಿವೆ.

ನಾಲ್ಕನೇ ವರ್ಷಕ್ಕೂ ಕೇಂದ್ರಸರ್ಕಾರ ಅದೇ ಅನುದಾನವನ್ನು ಎರಡನೇ ಕಂತಿನಲ್ಲಿ ನೀಡಿತು. ತಿಮ್ಮಪ್ಪದಾಸರದ್ದೇ ಆದ ಇನ್ನೊಂದು ಬೃಹತ್ ಹಸ್ತಪ್ರತಿ 'ಶ್ರೀಕೃಷ್ಣ ಬಾಲಲೀಲೆ'ಯ ಮೊದಲನೇ ಭಾಗವನ್ನು ಈ ಯೋಜನೆಯಡಿಯಲ್ಲಿ ಪ್ರಕಟನೆಗೆ ತೆಗೆದುಕೊಳ್ಳಲಾಯಿತು. ಈ ನಡುವೆ ಪ್ರತಿಷ್ಠಾನದ ಐದನೇ ವರ್ಷದಲ್ಲಿ ಶ್ರೀಯವರ ನೂರನೇ ವರ್ಷದ ಹುಟ್ಟುಹಬ್ಬ ಕಾರ್ಯಗಳು ಭರದಿಂದ ಸಾಗುತ್ತಿವೆ. ಬಿ.ಎಂ.ಶ್ರೀಯವರ ಜನ್ಮ ಶತಮಾನೋತ್ಸವವನ್ನು ಬಹಳ ವೈಶಿಷ್ಟ್ಯಪೂರ್ಣವಾಗಿ ಕರ್ನಾಟಕದಾದ್ಯಂತ ನಡೆಸಬೇಕೆಂಬುದು ಪ್ರತಿಷ್ಠಾನದ ಉದ್ದೇಶ. ಇಡೀ ನಾಡನ್ನು ಪ್ರತಿನಿಧಿಸುವಂತೆ ಒಂದು ಉತ್ಸವ ಸಮಿತಿಯನ್ನು ನಿಯೋಜಿಸಲಾಯಿತು.

ಈ ಉತ್ಸವಾಚರಣೆಯ ನಡುವೆ ಪ್ರತಿಷ್ಠಾನ ತನ್ನ ಐದನೆಯ ವರ್ಷವನ್ನು ಬಹಳ ವಿಜೃಂಭಣೆಯಿಂದ ಮುಗಿಸಿ ಆರನೇ ವರ್ಷದಲ್ಲಿ ನಡೆಯುತ್ತಿದೆ. ನಾಡಿನ ಮತ್ತು ಭಾರತದ ಪ್ರಮುಖ ಕೇಂದ್ರಗಳಲ್ಲಿ ಶ್ರೀಯವರ ಜೀವನ–ಸಾಧನೆಗಳ ವಿಚಾರಗೋಷ್ಠಿಗಳು, ಅಲ್ಲಿಯ ಸಂಸ್ಥೆಗಳ ನೆರವಿನೊಂದಿಗೆ ನಡೆದಿವೆ. ಮುಂದೆಯೂ ನಡೆಯಲಿವೆ. ಉತ್ಸವ ಸಮಿತಿಯ ಎಲ್ಲ ಉದ್ದೇಶಗಳೂ ಬಹುಮಟ್ಟಿಗೆ ಯಶಸ್ವಿಯಾಗಿ ನೆರವೇರುವ ಸಾಧ್ಯತೆಗಳಿವೆ. ಉತ್ಸವ ಕಾರ್ಯಕ್ರಮಗಳ ಜವಾಬ್ದಾರಿಯನ್ನು ಹೊತ್ತ ಶ್ರೀ ಜಿ. ನಾರಾಯಣ ಅವರ ಸಹಾಯ–ಸಹಕಾರಗಳನ್ನು ಪ್ರತಿಷ್ಠಾನ ಎಂದಿಗೂ ಮರೆಯಲು ಸಾಧ್ಯವಿಲ್ಲ. ಉತ್ಸವ ಸಮಿತಿಯ ಪ್ರಕಟನೆಗಳಲ್ಲಿ 'ಶ್ರೀವಾಣಿ',' ಆಚಾರ್ಯ ಬಿ.ಎಂ.ಶ್ರೀ', 'ಕನ್ನಡದ ಕಣ್ವ ಬಿ.ಎಂ.ಶ್ರೀ', ಶ್ರೀಯವರ ಆಯ್ದ ಕವನಗಳು ಎಂಬ ನಾಲ್ಕು ಪುಸ್ತಕಗಳು ಬಂದಿದ್ದು, 'ಶ್ರೀನಿಧಿ', 'ಬಿ.ಎಂ.ಎಸ್ : ದಿ ಮ್ಯಾನ್ ಅಂಡ್ ಹಿಸ್ ಮಿಷನ್', 'ಇಂಗ್ಲೀಷ್ ಗೀತಗಳು' ಮತ್ತು 'ಶ್ರೀಗಂಧ' ಇದೀಗ ಬಿಡುಗಡೆಯಾಗಿವೆ. ಉತ್ಸವ ಸಮಿತಿಯ ಕಾರ್ಯಗಳಿಗೆ ರಾಜ್ಯಸರ್ಕಾರ ಕೊಟ್ಟಿದ್ದ ಒಂದು ಲಕ್ಷ ರೂಗಳನ್ನು ಬಳಸಿಕೊಳ್ಳಲಾಗಿದೆ.

ಪ್ರತಿಷ್ಠಾನಕ್ಕೆ ಒಂದು ಯೋಗ್ಯವಾದ ಕಟ್ಟಡಕ್ಕಾಗಿ ಅಲ್ಪಸ್ವಲ್ಪ ಹಣ ಇದ್ದರೂ ಸ್ಥಳ ಇಲ್ಲ. ಸರ್ಕಾರದಿಂದ ಸಾಧ್ಯವಾದ ಮಟ್ಟಿಗೂ ಪ್ರಯತ್ನಿಸಲಾಗುತ್ತಿದೆ. ಸದ್ಯದಲ್ಲೇ ದೊರೆಯಬಹುದು. ಅಂತೂ ಪ್ರತಿಷ್ಠಾನ ತನ್ನ 5-6ನೇ ವರ್ಷದಲ್ಲಿ ಒಂದು ಕಟ್ಟಡವನ್ನು ಮಾಡಿಕೊಳ್ಳುವ ಸ್ಥಿತಿಯಲ್ಲಿದೆ.

ಈ ಉತ್ಸವ ಮುಗಿದ ಮೇಲೆ ಪ್ರತಿಷ್ಠಾನಕ್ಕೆ ಕೆಲಸವೇ ಇಲ್ಲ. ಕೇಂದ್ರ ಸರ್ಕಾರದ ಯೋಜನೆಯ ಮೂರನೇ ಕಂತು ರಾಜ್ಯ ಸರ್ಕಾರದ ಸಂಬಂಧಪಟ್ಟ ಕಚೇರಿಯ ಅಲಕ್ಷ್ಯದಿಂದ ನಿಂತಿದೆ. ಮುಂದೆ ಬರುತ್ತದೋ ಇಲ್ಲವೋ, ಗೊತ್ತಿಲ್ಲ. ಯೋಜನೆಗಳಿಗೆ ಸಹಾಯ ಮಾಡಲಾಗುವುದು ಆದರೆ ವಾರ್ಷಿಕ ಅನುದಾನ ನೀಡಲಾಗುವುದಿಲ್ಲವೆಂದು ರಾಜ್ಯಸರ್ಕಾರ ತಿಳಿಸಿದೆ. ಎರಡು ಮೂರು ಯೋಜನೆಗಳನ್ನು ಸರ್ಕಾರಕ್ಕೆ ಸಲ್ಲಿಸಿದ್ದರೂ ಯಾವುದೂ ಮಂಜೂರಾಗಿಲ್ಲ. ಕರ್ನಾಟಕ ಶಾಸನಗಳಲ್ಲಿ ದೊರಕುವ ಅಪಾರ ಪಾರಿಭಾಷಿಕ ಪದಗಳನ್ನು ಸಂಗ್ರಹಿಸಿ, ಪ್ರಯೋಗ–ಅರ್ಥಗಳೊಂದಿಗೆ 'ಶಾಸನ ಪಾರಿಭಾಷಿಕ ಪದ ಕೋಶ' ನಿರ್ಮಾಣ ಯೋಜನೆ, ಮೈಸೂರಿನ ಪ್ರೊ॥ ಎಚ್. ಎಂ. ಶಂಕರನಾರಾಯಣರಾವ್ ಅವರು ಪ್ರತಿಷ್ಠಾನಕ್ಕೆ ನೀಡಿರುವ ಬಿ.ಎಂ.ಶ್ರೀ, ಡಿ.ಎಲ್.ಎನ್, ಎ.ಆರ್.ಕೃ., ತೀ.ನಂ.ಶ್ರೀಯವರ ಸಹಕಾರದಿಂದ ಸಂಪಾದಿಸಿರುವ "ಕುಮಾರ ವ್ಯಾಸ ಭಾರತ ಸಂಗ್ರಹ"ದ ಪ್ರಕಟನ ಯೋಜನೆಗಳು ಈಗ ಸರ್ಕಾರದ ಮುಂದಿವೆ.

ಇವುಗಳ ಜೊತೆಗೆ ಶ್ರೀ ಕೆ. ಎಂ. ಮುನಿಕೃಷ್ಣಪ್ಪನವರ ಆಸಕ್ತಿಯಿಂದ "ಸಹೃದಯ ಗೋಷ್ಠಿ" ನಿರಂತರವಾಗಿ ನಡೆಯುತ್ತಲೇ ಇದೆ. ಶ್ರೀಯವರ ದೃಷ್ಟಿ ಕೇವಲ ಸಂಶೋಧನೆ, ಹಸ್ತಪ್ರತಿ ಸಂಪಾದನೆ, ಗ್ರಂಥ ಪ್ರಕಟನೆಯಷ್ಟೇ ಆಗಿರದೆ, ಹೊಸಗನ್ನಡದ, ಹೊಸ ಹೊಸ ಸಾಧನೆಗಳನ್ನು ನಡೆಸುವುದು, ಅಂಥವರಿಗೆ ಪ್ರೋತ್ಸಾಹ ಕೊಡುವುದೂ

ಇದೆ. ಈ ಕಾರಣದಿಂದ ಕನ್ನಡದ ಹೊಸ ಬರಹಗಾರರನ್ನು ಪ್ರೋತ್ಸಾಹಿಸಿ ಅವರ ಬರಹದ ಪ್ರಕಾಶಕ್ಕೆ ಒಂದು ವೇದಿಕೆ ಒದಗಿಸಿ, ಉತ್ತೇಜನ ನೀಡುವ ಸಲುವಾಗಿ ಪ್ರತಿಷ್ಠಾನ ಸ್ಥಾಪನೆಯಾದಾಗಿನಿಂದಲೂ ಬಹುಮಟ್ಟಿಗೆ ಪ್ರತಿ ತಿಂಗಳೂ ಸಹೃದಯ ಗೋಷ್ಠಿಗಳನ್ನು ನಡೆಸುತ್ತಿದೆ. ಈ ಸಂಬಂಧದಲ್ಲಿ ಕನ್ನಡದಲ್ಲಿ ಕಾವ್ಯದ ಬಗ್ಗೆ ಕೆಲಸ ಮಾಡಬಲ್ಲವರಿಗೆ ಒಂದು ಆಕರ ಗ್ರಂಥಾಲಯವನ್ನಾಗಿ ಮಾಡಬೇಕೆಂಬ ಉದ್ದೇಶದಿಂದ "ಕವನ ಭಂಡಾರ"ವನ್ನು ಸ್ಥಾಪಿಸಿದೆ. ಅನೇಕ ಕವಿಗಳು, ಪ್ರಕಾಶಕರು ತಮ್ಮ ಕವನಸಂಗ್ರಹಗಳನ್ನು ದಾನವಾಗಿ ನೀಡಿದ್ದಾರೆ. ಪ್ರತಿಯೊಬ್ಬ ಕವಿಯ ಕವನ ಸಂಕಲನಗಳನ್ನು ಸಂಗ್ರಹಿಸುವ ಯೋಜನೆ ನಮ್ಮದು. ಅನೇಕ ಜನ ಅನೇಕ ರೀತಿಯಲ್ಲಿ ಪ್ರತಿಷ್ಠಾನಕ್ಕೆ ನಿಷ್ಠೆಯಿಂದ ದುಡಿದು. ನೆರವಾಗಿ ಸಹಕರಿಸಿದ್ದಾರೆ. ಪ್ರತಿಷ್ಠಾನದ ಅಭಿಮಾನಿಗಳ ಪಟ್ಟಿ ಬಹಳ ದೊಡ್ಡದು. ಇದೇ ನಮ್ಮ ಬಹು ದೊಡ್ಡ ಆಸ್ತಿ ; ಬಂಡವಾಳ.

ಪ್ರತಿಷ್ಠಾನ, ಈಗ ಉಡುಪಿಯ ಗೋವಿಂದ ಪೈ ಸಂಶೋಧನಾ ಕೇಂದ್ರದ ಮಾದರಿಯಲ್ಲಿ ಯು.ಜಿ.ಸಿ. ಮತ್ತು ವಿಶ್ವವಿದ್ಯಾನಿಲಯಗಳಿಂದ ಮನ್ನಣೆ ಪಡೆದ ಸಂಶೋಧನಾ ಕೇಂದ್ರವಾಗಬೇಕೆಂದು ಕನಸು ಕಾಣುತ್ತಿದೆ. ಹಲವು ಕನಸುಗಳನ್ನು ಹೊತ್ತು ಪ್ರತಿಷ್ಠಾನ ಮುಂದೆ ಸಾಗುತ್ತಿದೆ.

ಋತಮೊಂದೆ ಗೆಲ್ಲುವುದು, ಅನೃತವಲ್ತು;
ಅಮೃತಮೆನೆ ವಿದ್ಯೆಯೆ; ಅವಿದ್ಯೆಯಲ್ತು;
ವಿಶ್ವಭಾರತಿ ಶರಣು, ಕಿರುತೀರ್ಥವಲ್ತು.

# ಲೇಖನಗಳು

ಸಂಸ್ಮರಣ ಸಂಚಿಕೆ ● ಶ್ರೀಗಂಧ

# ಶ್ರೀಯವರ ಕನ್ನಡ ನುಡಿ ಸೇವೆ

ಡಾ|| ಜಿ. ಎಸ್. ಕಾಪಸೆ

'ಕನ್ನಡದ ಕಣ್ವ'ರೆಂದು ಹೆಸರಾದ ಬಿ. ಎಂ. ಶ್ರೀ ಅವರ ಕನ್ನಡದ ಕಾರ್ಯ ಬಹುಮುಖವಾದುದು. ಅವರು ನವೋದಯ ಕಾವ್ಯದ ಜನಕರು. ಕನ್ನಡ ಸಾಹಿತ್ಯ ಚರಿತ್ರೆ, ಅಲಂಕಾರ ಶಾಸ್ತ್ರಗಳಿಗೆ ಅಡಿಪಾಯ ಹಾಕಿಕೊಟ್ಟವರು. ಪಾಶ್ಚಾತ್ಯ ರುದ್ರನಾಟಕಗಳ ಮಾದರಿಗಳನ್ನು ಕನ್ನಡಕ್ಕೆ ತಂದವರಲ್ಲಿ ಮೊದಲಿಗರು. ಕನ್ನಡ ವಿಮರ್ಶೆಗೆ ಹೊಸ ದಿಕ್ಕನ್ನು ತೋರಿಸಿಕೊಟ್ಟವರಲ್ಲಿ ಅವರೊಬ್ಬ ಆದ್ಯರು. ಕನ್ನಡ ಪ್ರಾಧ್ಯಾಪಕತ್ವದ ಹೊಣೆ ಹೊತ್ತು, ಒಂದು ಪರಂಪರೆಯನ್ನೇ ನಿರ್ಮಿಸಿಕೊಟ್ಟವರು. ಅವರ ಕನ್ನಡದ ಮೇಲಿನ ಪ್ರಭುತ್ವ. ಪಾಂಡಿತ್ಯಗಳು ಅವರ ಇಂಗ್ಲಿಷ್ ಪ್ರಾಧ್ಯಾಪಕತ್ವವನ್ನು ಹಿಂದೆ ಸರಿಸುವಂತೆ ಮಾಡಿದ್ದು ಒಂದು ವಿಶೇಷ. ಕನ್ನಡ ನುಡಿಯ ಮೇಲಿನ ಅನನ್ಯವಾದ ಶ್ರದ್ಧೆಯಲ್ಲಿ ಅವರ ವ್ಯಕ್ತಿತ್ವದ ಶ್ರೀಗಂಧದ ವೃಕ್ಷ ರೂಪ ತಳೆದು, ನಾಡಿನುದ್ದಗಲಕ್ಕೂ ತನ್ನ ಸೌಗಂಧವನ್ನು ಬೀರಿದ್ದು ಒಂದು ಅವಿಸ್ಮರಣೀಯ ಇತಿಹಾಸ.

ಕನ್ನಡ ಕಾವ್ಯ ಹಾಗೂ ಸಾಹಿತ್ಯವನ್ನು ಕುರಿತು ಶ್ರೀಯವರು ಮಾಡಿದ ಚಿಂತನೆ ಮತ್ತು ಸಾಧನೆ ಹೊಸಗನ್ನಡ ಸಾಹಿತ್ಯದ ಉದಯಕ್ಕೆ ಕಾರಣವಾದಂತೆ, ಅವರ ಕನ್ನಡ ನುಡಿಯ ಬಗ್ಗೆ ತೋರಿದ ಕಕ್ಕುಲತೆ–ಕಾಳಜಿ ; ಶ್ರದ್ಧೆ–ನಿಷ್ಠೆಗಳು ಕನ್ನಡಿಗರಲ್ಲಿ ಕನ್ನಡತನದ ಅರಿವನ್ನು, ಎಚ್ಚರವನ್ನು–ಕನ್ನಡವನ್ನು ಮರೆತಂಥ ಕಾಲದಲ್ಲಿ–ಹುಟ್ಟಿಸಿದವೆಂಬುದು ಅತ್ಯಂತ ಗಮನಾರ್ಹವಾದ ಸಂಗತಿಯಾಗಿದೆ. ಅವರಿಗೆ ಕನ್ನಡ ನುಡಿಯ ಮೇಲಿರುವ ಅನನ್ಯವಾದ ಮಮತೆ ಯಾರೊಬ್ಬರ ಪ್ರೇರಣೆಯಿಂದ ಮೂಡಿತೆನ್ನುವುದಕ್ಕಿಂತ ಅದು ಅವರ ಅಂತರಂಗದ ಪ್ರೇರಣೆಯೇ ಆಗಿದ್ದಿತೆನ್ನುವುದು ಹೆಚ್ಚು ಸಮಂಜಸವಾಗಿ ತೋರುತ್ತದೆ. ಭಾರತೀಯರು ಇಂಗ್ಲಿಷ್ ಸಾಹೇಬರಾಗಿ ನಿರ್ಮಾಣವಾಗುತ್ತಿದ್ದ ಕಾಲದಲ್ಲಿಯೇ ಅವರು ಅಚ್ಚ ಕನ್ನಡಿಗರಾಗಿ ಬೆಳೆಯತೊಡಗಿದ್ದು ಗಮನಿಸತಕ್ಕ ಅಂಶವಾಗಿದೆ. ಇಂಗ್ಲಿಷ್ ಸಾಹಿತ್ಯವನ್ನು ಓದಿದ ಅವರು ಅಪ್ಪಟ ಇಂಗ್ಲಿಷ್ ಭಕ್ತರಾಗದೆ, ಇಂಗ್ಲಿಷಿನ ಉತ್ತಮಾಂಶಗಳನ್ನು ಜೀರ್ಣಿಸಿಕೊಂಡು ತನ್ಮೂಲಕ ಕನ್ನಡಕ್ಕೆ ಹೊಸ ಆಯಾಮವನ್ನು ತಂದುಕೊಡಲು ವಿದ್ಯಾರ್ಥಿದೆಸೆಯಿಂದಲೇ ಗಂಭೀರವಾಗಿ ಚಿಂತಿಸುತ್ತಿರುವುದು ಕಂಡು ಬರುತ್ತದೆ. ಕಲಬುರ್ಗಿಯ ೧೪ನೆಯ ಸಾಹಿತ್ಯ ಸಮ್ಮೇಲನದ ಅಧ್ಯಕ್ಷ ಭಾಷಣದಲ್ಲಿ ಶ್ರೀಯವರು ತಮ್ಮ ಕನ್ನಡದ ಚಿಂತನೆಯ ವಿಷಯವನ್ನು ಪ್ರಸ್ತಾಪಿಸುತ್ತ "ಮದರಾಸಿನಲ್ಲಿ ವಿದ್ಯಾರ್ಥಿಗಳಾಗಿದ್ದಾಗ, ನನ್ನ ಸ್ನೇಹಿತರೂ ನಾನೂ ಸಾಯಂಕಾಲ ಸಮುದ್ರ ತೀರದಲ್ಲಿ ಮರಳಿನ ಮೇಲೆ ಕುಳಿತು, ಸಮಾಜದ ಮತ್ತು ಸಾಹಿತ್ಯದ ವಿಷಯಗಳನ್ನು ಚರ್ಚಿಸುತ್ತ-———ಕನ್ನಡ ನಾಡಿಗೆ, ಕನ್ನಡ ನುಡಿಗೆ ನಮ್ಮ ಬಾಳಿಕೆಯನ್ನೇ ಕಾಣಿಕೆಯಾಗಿ ಒಪ್ಪಿಸಿಬಿಡಬೇಕು–ಎಂದು ಪೌರುಷವನ್ನು ಕೊಚ್ಚಿಕೊಳ್ಳುತಿದ್ದುದ್ದು. ಕನ್ನಡಕಾವ್ಯಗಳನ್ನೆಲ್ಲಾ ಓದಬೇಕು, ಜನರಲ್ಲಿ ಬಳಕೆಗೆ ತರಬೇಕು, ಉಪಾಧ್ಯಾಯನಾಗಿ ವಿದ್ಯಾರ್ಥಿಗಳಲ್ಲಿ ಕನ್ನಡದ ಪ್ರೇಮವನ್ನು ಬಿತ್ತಬೇಕು, ಜನಸಾಮಾನ್ಯಕ್ಕೆ ತಿಳುವಳಿಕೆಯೂ, ಹೊಸ ನಡವಳಿಕೆಯೂ ಹುಟ್ಟುವಂತೆ ಕಾಲಕ್ಕೆ ತಕ್ಕ ಪುಸ್ತಕಗಳನ್ನು ಬರೆಯಬೇಕು. ಷೇಕ್ಸ್ಪಿಯರಿನ ನಾಟಕಗಳನ್ನೂ, ಗ್ರೀಕರ ರುದ್ರ ನಾಟಕಗಳನ್ನೂ, ಪ್ಲೇಟೋವಿನ ಸಂವಾದಗಳನ್ನೂ ಕಾರ್ಲೈಲಿನ ಧೀರೋಪದೇಶಗಳನ್ನೂ ಕನ್ನಡಕ್ಕೆ ತರಬೇಕು"[1] ಎಂದಿವೇ ಮುಂತಾದ ಸವಿಗನಸುಗಳನ್ನು ಆಗ ಅವರು ಕಂಡದ್ದನ್ನು ನೆನೆದುಕೊಂಡಿದ್ದಾರೆ. ಅವರ ಆ ಸವಿಗನಸುಗಳಲ್ಲಿ ಬಹುಪಾಲು ನನಸಾಗಿಸಿಕೊಂಡಿದ್ದುದು, ಅವರು ಕೈಕೊಂಡ ವೃತ್ತಿ ಮತ್ತು ಮಾಡಿದ ಸಾಧನೆಯಿಂದ ಸ್ಪಷ್ಟವಾಗುತ್ತದೆ.

ಶ್ರೀಯವರು ತಮ್ಮ ವಿದ್ಯಾರ್ಥಿ ಜೀವನ ಪೂರ್ಣಗೊಳಿಸಿ, ಅಧ್ಯಾಪಕ ವೃತ್ತಿಯನ್ನು ಕೈಕೊಂಡದ್ದು ೧೯೦೯ರಲ್ಲಿ. ಅವರು ಇಂಗ್ಲಿಷ್ ಓದಿ, ಇಂಗ್ಲಿಷ್ ಅಧ್ಯಾಪಕರಾಗಿದ್ದರೂ ಕನ್ನಡವನ್ನೇ ಕುರಿತು ಆಗಿನಿಂದಲೇ ಹೆಚ್ಚಾಗಿ ಚಿಂತಿಸಿದ್ದುದು ತಿಳಿದುಬರುತ್ತದೆ. ಅವರು ಅಧ್ಯಾಪಕ ವೃತ್ತಿಯನ್ನು ಸ್ವೀಕರಿಸಿದ ಅಲ್ಪಾವಧಿಯಲ್ಲಿಯೇ ಅಂದರೆ ೧೯೧೧ರಲ್ಲಿಯೇ 'ಕನ್ನಡ ಮಾತು ತಲೆಯೆತ್ತುವ ಬಗೆ' ಕುರಿತು ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದಲ್ಲಿ ಮಾಡಿದ ಅಮೋಘ ಉಪನ್ಯಾಸ ಇಂದಿಗೂ ಚಿಂತನೀಯವಾಗಿದೆ.

ಇಂಗ್ಲಿಷ್ ಭಾಷೆಯ ಗಾಢ ಪ್ರಭಾವವಿರುವ, ಇಂಗ್ಲಿಷ್ ಸಾಹಿತ್ಯದಲ್ಲಿಯೇ ಸೊಗಸಿದೆಯೆಂದು ಭಾವಿಸಿಕೊಂಡ ಹಾಗೂ ಅರಿತುಕೊಂಡ ಅಂದಿನ ವಿದ್ಯಾವಂತರು ನಮ್ಮ ಕನ್ನಡದಲ್ಲಿ ಅಂಥ ವಿಶೇಷವಾದುದನ್ನು ಕಾಣದೇ ಹೋದಾಗ ಅವರನ್ನು ತಪ್ಪಿತಸ್ಥರನ್ನಾಗಿ ತಿಳಿಯದೆ, ಯೋಗ್ಯ ಸಾಹಿತ್ಯವನ್ನು ಪೂರೈಸಿಕೊಡುವ ಯೋಜನೆಯನ್ನು ಶ್ರೀಯವರು ಮಾಡುತ್ತಾರೆ. ಶ್ರೀಯವರ ಕನ್ನಡದ ಶ್ರದ್ಧೆ ವಾಸ್ತವ ದೃಷ್ಟಿಯನ್ನು ಹೊಂದಿದ, ವಿಚಾರಶೀಲವಾದ ಶ್ರದ್ಧೆಯೆಂಬುದು ಅವರು ತಳೆದ ಧೋರಣೆಯಿಂದ ಗಮನಕ್ಕೆ ಬರುತ್ತದೆ. ಅವರು ಆಗಿನ ಭಾಷಾ ಪರಿಸ್ಥಿತಿಯನ್ನು ವಿಶ್ಲೇಷಿಸಿ, ಇಂಗ್ಲಿಷ್ ಭಾಷೆಗೆ ಇಡೀ ದೇಶದಲ್ಲಿ ಮಹತ್ವದ ಸ್ಥಾನವಿರುವುದನ್ನು ಕಂಡುಕೊಂಡು "ಮುಖ್ಯ ಭಾಷೆಯಲ್ಲದಿದ್ದರೂ ತನ್ನ ಪ್ರಾಂತ್ಯದಲ್ಲಿ ತಾನು ಉಪಭಾಷೆಯಾಗಿರುವಂತೆ ಆದರೂ ಮಾಡಬೇಕು. ಹೀನಸ್ಥಿತಿಯನ್ನು ನೋಡಿ ಕೈಬಿಡಬಾರದು. ದೋಷಗಳನ್ನು ಎತ್ತಿ ಹಾಕುತ್ತ ಅಲ್ಲಗಳೆಯಬಾರದು. ಭಾಷೆಯ ಮತ್ತು ಕಾವ್ಯಮಾಲೆಯ ಪೂರ್ವೋತ್ತರಗಳನ್ನು ತಿಳಿದು, ಅವು ಮುಂದೆ ಶೋಭಿಸಿ ತಮ್ಮ ಸತ್ವದಿಂದಲೇ ಜನರು ಮೋಹಿಸುವಂತೆ ಮಾಡುವು-ದಕ್ಕಾಗಿ ಎಲ್ಲರೂ ಅಭಿಮಾನವಿಟ್ಟುಕೊಂಡು ಯೋಗ್ಯ

---

೧. ಶ್ರೀ ಸಾಹಿತ್ಯ ಪು-೨೬೭

ತಾನುಸಾರ ಸಹಾಯ ಮಾಡಬೇಕು——— ನಮ್ಮ ಭಾಷೆಯನ್ನು ನಾವು ಎತ್ತದೆ ಹೋದರೆ ಎತ್ತುವವರು ಯಾರು? ಎತ್ತುವುದಕ್ಕೆ ನಿಂತರೆ ತಡೆಯುವವರು ಯಾರು?"[2] ಹೀಗೆ ಕಳಕಳಿಯಿಂದ ಹಾಗೂ ಒಂದು ಸವಾಲನ್ನು ಸ್ವೀಕರಿಸುವಂತೆ ಕನ್ನಡದ ಬಗ್ಗೆ ಅವು ಅವರು ಮಾತಾಡಿದ್ದು ನಮಗೂ ಒಂದು ಆಹ್ವಾನವಾಗಿಯೇ ಕಾಣುತ್ತದೆ. ತಮ್ಮ ಈ ಯೋಜನೆಯನ್ನು ಮುಂದುವರಿಸಿದ ಶ್ರೀಯವರು ಅನೇಕ ಸಲಹೆ ಸೂಚನೆಗಳನ್ನೂ ಮಾಡಿದ್ದುಂಟು. ಅವರಿಗಿರುವ ಆಗಿನ ಮುಖ್ಯವಾದ ಕಾಳಜಿಯೆಂದರೆ ಜನಸಾಮಾನ್ಯರಿಗಾಗಿ ನಮ್ಮ ಸಾಹಿತ್ಯದೃಷ್ಟಿ ಇಲ್ಲದಿರುವುದು. ಅದಕ್ಕಾಗಿ ಅವರು ಮರುಗಿದ್ದೂ ಉಂಟು. ಹೊಸ ದಾರಿಯನ್ನು ಕಂಡುಕೊಂಡಿದ್ದೂ ಉಂಟು. ಕಾವ್ಯದ ವಸ್ತು, ರೀತಿ, ಭಾವ, ವರ್ಣನೆ, ಶೈಲಿ ಮುಂತಾದವುಗಳಿಗೆ ಹೊಸತನವನ್ನು ತಂದು ಕೊಡುವುದು ಆಗ ಶ್ರೀಯವರ ಮುಂದಿರುವ ಪ್ರಥಮ ಕರ್ತವ್ಯವಾಗಿತ್ತು. ಈ ವಿಷಯವಾಗಿ ಅವರು ವಿವರವಾಗಿ ತಮ್ಮ ಆ ಉಪನ್ಯಾಸದಲ್ಲಿ ಚರ್ಚಿಸಿದ್ದುಂಟು. ಇಲ್ಲಿ ಗಮನಿಸತಕ್ಕ ಮುಖ್ಯ ಅಂಶವೆಂದರೆ ಅವರು ಸಂಪೂರ್ಣವಾಗಿ ಹೊಸಗನ್ನಡದ ಕಡೆಗೆ ಮುಖ ಹೊರಳಿಸಿದ್ದು. "ಭಾಷೆಯ ವಿಚಾರದಲ್ಲಿ ಹೊಸಗನ್ನಡವನ್ನೇ ಬರೆಯಬೇಕು" ಎಂಬುದು ಅವರ ಪ್ರಪ್ರಥಮ ಸಲಹೆ. "ರಾಜರಿಗೇ ಆಗಲಿ, ಪಂಡಿತರಿಗೇ ಆಗಲಿ ಬರೆಯತಕ್ಕ ಕಾಲ ಹೋಯಿತು. ಈಗ ಹೆಂಗಸರು, ಗಂಡಸರು, ಚಿಕ್ಕವರು, ದೊಡ್ಡವರು, ಬ್ರಾಹ್ಮಣರು, ಒಕ್ಕಲಿಗರು, ಅಷ್ಟರೂ ಓದುವಂತೆ ಬರೆಯಬೇಕು" ಎಂಬುದು ಅವರ ಖಡಾಖಂಡಿತವಾದ ನಿಲುವು. "ಗ್ರಂಥ ವಿಷಯ ಪ್ರಯೋಜನವಾದ ಅಂಶವಾಗಿರಬೇಕು. ಸಮಾಜದ ಏಳಿಗೆಗೆ ನೆರವಾಗುವಂತೆ ಇರಬೇಕು"[3] ಎಂಬುದು ಅವರ ಇನ್ನೊಂದು ಸೂಚನೆ. ಶುದ್ಧ ಕಲಾಕೃತಿಯ ದೃಷ್ಟಿಯಿಂದ ಈ ಪ್ರಯೋಜನದ ವಿಷಯ ಎಷ್ಟರ ಮಟ್ಟಿಗೆ ಸಮಂಜಸ? ಎಂಬ ವಾದ ಹುಟ್ಟಬಹುದು. ಆದರೆ ಅದು ಇಲ್ಲಿ ಪ್ರಸ್ತುತವಲ್ಲ. ಜನರ ಭಾಷೆಯಲ್ಲಿ, ಜನರಿಗೆ ತಿಳಿಯುವಂತೆ ಮತ್ತು ಅವರಿಗೆ ಉಪಯುಕ್ತವಾಗುವಂತೆ ನಮ್ಮ ಸಾಹಿತ್ಯವಿರಬೇಕೆಂಬುದು ಮಾತ್ರ ಗಮನಾರ್ಹವಾದುದು. ಈ ಮಾತಿಗೆ ಪೂರಕವೆನ್ನುವಂತೆ ಇನ್ನೊಂದೆಡೆಯಲ್ಲಿ ಶ್ರೀಯವರು ಅಭಿಪ್ರಾಯಪಟ್ಟಿದ್ದುದು ಹೀಗೆ "ಈಗಿನ ಕಾಲದಲ್ಲಿ ವಿದ್ಯಾವಂತರಾದವರು ಇಂಗ್ಲಿಷ್ ವಿದ್ಯೆಯಿಂದ ತಾವು ಪಡೆದ ಉತ್ತಮ ಜ್ಞಾನವನ್ನು ಕೂಡಿದ ಮಟ್ಟಿಗೆ ಸಾಮಾನ್ಯ ಜನರೂ ತಿಳಿಯುವ ಹಾಗೆ ಅವರ ಆಡು ಭಾಷೆಯಲ್ಲೇ ಹರಡುವುದಕ್ಕೆ ಶಕ್ತರಾಗಿರಬೇಕಾದದ್ದು ನಮ್ಮ ದೇಶದ ಏಳಿಗೆಗೆ ಅವಶ್ಯಕವಾದ ಸೌಕರ್ಯಗಳಲ್ಲಿ ಒಂದಾಗಿದೆ."[4]

ಹೀಗೆಲ್ಲ ಚಿಂತನೆ ಮಾಡಿದ ಶ್ರೀಯವರು ಪದಪ್ರಯೋಗ. ವ್ಯಾಕರಣ ರೂಪಗಳ ಬಗ್ಗೆಯೂ ವಿವರವಾಗಿ ಯೋಚಿಸಿದ್ದಾರೆ. ಪದಪ್ರಯೋಗದಲ್ಲಿ ಅವರದು ವಾಸ್ತವ ದೃಷ್ಟಿ ಹೊಂದಿದ ಉದಾರ ಮಾರ್ಗ. ಅವರ ಈ ಮಾರ್ಗ ಎಂದಿಗೂ ಸ್ವೀಕಾರಾರ್ಹವೇ. ಅವರು ಒಂದೆಡೆಯಲ್ಲಿ ಹೇಳುತ್ತಾರೆ: "ಜನಗಳು ರೂಢಿಗೆ ತಂದ ಮಾತುಗಳನ್ನು ಸಮಯೋಚಿತವಾಗಿ ಒಪ್ಪಿಕೊಳ್ಳಬೇಕು. ಕೈಯಲ್ಲಾದ ಮಟ್ಟಿಗೆ ಮಾತುಗಳನ್ನು ಕಲ್ಪನೆ ಮಾಡಬಾರದು———ರೈಲನ್ನು ರೈಲೆಂದೇ ಕರೆಯುವುದು ಉತ್ತಮ. ಹೊಗೆಬಂಡಿ, ಹೊಗೆಗಾಡಿ ಎನ್ನುವುದು ಮಧ್ಯಮ. ಧೂಮ ಶಕಟವೆನ್ನುವುದು ಅಧಮ."[5] ಈ ವಿಚಾರವನ್ನು ಗಮನಿಸಿದರೆ ಪೋಲಿಸರನ್ನು 'ಆರಕ್ಷಕ' ಎನ್ನುವುದು, ಇಂಜಿನಿಯರನ್ನು 'ಅಭಿಯಂತ' ಎಂದು ಕರೆಯುವುದು ಅಧಮ ಕಾರ್ಯವಾಗಿಯೇ ಕಾಣಿಸದಿರದು. ಜನಬಳಕೆಯಲ್ಲಿ ಬರುವ ಯಾವ ಶಬ್ದವೇ ಇರಲಿ. ಅದು ಆ ಭಾಷೆಯ ಸ್ವತ್ತಾಗಿ ಬಿಡುತ್ತದೆ. ಅದನ್ನು ಇದ್ದಕ್ಕಿದ್ದಂತೆ ಬಳಸಬೇಕೆನ್ನುವುದು ಅತ್ಯಂತ ಸೂಕ್ತವಾದ ಸಲಹೆಯೇ.

ಶ್ರೀಯವರು ನಮ್ಮ ಭಾಷೆಯಲ್ಲಿ ಮೂರು ರೂಪಗಳಿರುವುದನ್ನು ಗುರುತಿಸಿದ್ದಾರೆ: ೧. ಪೂರ್ವದ ರೂಪ, ೨. ರೂಢಿಯ ರೂಪ, ೩. ಗ್ರಾಮ್ಯರೂಪ. ಈ ಮೂರು ರೂಪಗಳಲ್ಲಿ ರೂಢಿಯ ರೂಪಗಳನ್ನು ಸ್ವೀಕರಿಸುವುದು ಅವರಿಗೆ ಸಮಂಜಸವಾಗಿ ಕಂಡಿದೆ. ಈ

---

೨. ಶ್ರೀ ಸಾಹಿತ್ಯ ಪು–೨೪೮–೨೪೯

೩. ಅದೇ ಪು–೨೫೪–೨೫೫

೪. ಶ್ರೀ ಸಾಹಿತ್ಯ ಪು–೨೫೭

೫. ಅದೇ ಪು–೨೫೪

ಬಗ್ಗೆ ಅವರು ವಿವರಣೆ ನೀಡುತ್ತ : "ರೂಢಿ ಭಾಷೆಯನ್ನೇ ಆಧಾರವಾಗಿಟ್ಟುಕೊಳ್ಳುವುದು ; ಬಿಟ್ಟು ಹೋದ ಪೂರ್ವದ ರೂಪಗಳನ್ನು ಸಾಧ್ಯವಾದ ಮಟ್ಟಿಗೆ ಬಿಟ್ಟು ಬಿಡುವುದು ; ಇನ್ನೂ ಬಳಕೆಯಲ್ಲಿರುವ ರೂಪಗಳನ್ನು ಉಪಯೋಗಿಸುವುದು : ಹಿಂದೆ ಅಲ್ಲದಿದ್ದರೂ ಈಚೆಗೆ ಹೊಸದಾಗಿ ಹುಟ್ಟಿರುವುಗಳಲ್ಲಿ ಉತ್ತಮರಾಡುವ, ಎಲ್ಲಾ ಕಡೆಯೂ ಸಾಮಾನ್ಯವಾದ, ವಿಧಿಬದ್ಧವಾದ ರೂಪಗಳನ್ನು ಸೇರಿಸಿಕೊಳ್ಳುವುದು. ಅತಿ ಪಾಂಡಿತ್ಯವನ್ನು ಬಿಡುವುದ-ಕ್ಕೆಷ್ಟೋ ಅಷ್ಟು ಹೊರತು, ಮಿಕ್ಕ ಭಾಗದಲ್ಲಿ ಗ್ರಾಮ್ಯವನ್ನು ಸ್ವೇಚ್ಛಾಪ್ರವೃತ್ತಿಯನ್ನು ಒಪ್ಪಿಕೊಳ್ಳದೆ ತಡೆಯುವುದು ಮುಖ್ಯ"[6] ಎಂದಿರುವರು. ಹೀಗೆ ಭಾಷೆಯನ್ನು ಸ್ವೀಕರಿಸುವ, ಬಿಡುವ ಕಾರ್ಯದಲ್ಲಿ ತಕ್ಕ ಮಟ್ಟಿಗೆ ವೈಜ್ಞಾನಿಕವಾದ ಹಾಗೆಯೇ ವ್ಯಾವಹಾರಿಕವಾದ ಧೋರಣೆಯನ್ನು ಶ್ರೀಯವರು ತಳೆದಿರುವರು. ಅವರ ಆಲೋಚನೆಯಲ್ಲಿ ಸುಸಂಸ್ಕೃತ ಹಾಗೂ ಸುಧಾರಣಾಪರ ದೃಷ್ಟಿಕೋನವಿರುವುದನ್ನು ಯಾರೂ ಗುರುತಿಸಬಹುದು.

ಮಾತೃಭಾಷೆ, ದೇಶಭಾಷೆ, ರಾಷ್ಟ್ರಭಾಷೆಗಳನ್ನು ಕುರಿತೂ ಅವರು ಗಂಭೀರವಾಗಿ ಆಲೋಚನೆ ಮಾಡಿದ್ದಾರೆ. ಅವರ ಈ ಆಲೋಚನೆಯಲ್ಲಿ ಭಾಷಾ ಬಳಕೆಯ ಸೈದ್ಧಾಂತಿಕ ಭೂಮಿಕೆಯಿದ್ದು ಯಾವ ಕಾಲಕ್ಕೂ ಒಪ್ಪಿತವಾಗಬಹುದಾದ ವಿಚಾರಗಳನ್ನು ಅವರು ಮಂಡಿಸಿದ್ದಾರೆ. ಇಲ್ಲಿಯ ವಿಶ್ಲೇಷಣೆಯಲ್ಲಿ ಆಧುನಿಕ ಭಾಷಾವಿಜ್ಞಾನಿಯು ಮಾಡಬಹುದಾದ ವೈಜ್ಞಾನಿಕ ಚರ್ಚೆಯಿರುವುದನ್ನೂ ಗಮನಿಸಬಹುದು.

ಮಾತೃಭಾಷೆಯ ಬಗ್ಗೆ ಮಾತನಾಡುತ್ತ "ತಾಯಿ ಆಡುವ ಭಾಷೆ, ತಾಯಿಯಿಂದ ಕಲಿತ ಭಾಷೆ, ತಾಯಿನುಡಿ, ಮಾತೃಭಾಷೆ"[7] ಎಂದು ವ್ಯಾಖ್ಯಾನಿಸಿ, ದೇಶಭಾಷೆಯ ವಿಷಯವನ್ನು ಪ್ರಸ್ತಾಪಿಸುತ್ತಾರೆ. "ದೇಶದಲ್ಲಿ ಒಂದೇ ಭಾಷೆ ಇದ್ದರೆ ಅದು ಮಾತೃಭಾಷೆಯೂ ಹೌದು, ದೇಶಭಾಷೆಯೂ ಹೌದು."[8] ಆದರೆ ಈ ರೀತಿ ಒಂದೇ ಭಾಷೆಯುಳ್ಳ ದೇಶವಿರುವುದು ವಿರಳ. ಅನೇಕ ಭಾಷೆಗಳುಳ್ಳ ದೇಶವಿರುವುದೇ ಹೆಚ್ಚು. ಹಾಗಿದ್ದರೂ ಆ ದೇಶಕ್ಕೆ ಒಂದು ಸರ್ವಮಾನ್ಯವಾದ ಭಾಷೆ ಇರುತ್ತದೆ. ಭಾರತವು ಬಹುಭಾಷೆಯುಳ್ಳ ದೇಶ. ಸರ್ವಮಾನ್ಯತೆ ಪಡೆದ ಭಾಷೆ ಯಾವುದು ? ಎಂಬ ಪ್ರಶ್ನೆ ಇದ್ದೇ ಇದೆ. ಆ ಮಾತು ಬೇರೆ. ಕನ್ನಡ ನಾಡಿನ ದೃಷ್ಟಿಯಿಂದ ನಮ್ಮ ದೇಶ (ನಾಡ) ಭಾಷೆ ಕನ್ನಡವೇ. ಕನ್ನಡ ನಾಡಿನಲ್ಲಿಯೂ ಅನೇಕ ಮಾತೃಭಾಷೆಗಳುಂಟು. ಅನೇಕ ಮಾತೃಭಾಷೆಗಳುಳ್ಳ ಒಂದು ನಾಡಿನ ಭಾಷಾ ಬಳಕೆಯ ವಿಷಯವನ್ನು ಆಲೋಚಿಸುತ್ತ ಶ್ರೀಯವರು "ದೇಶದಲ್ಲಿ ಮಾತೃಭಾಷೆಗಳು ಅನೇಕ ಇದ್ದರೂ ಇರಬಹುದು. ಬೇರೆ ಬೇರೆ ಭಾಷೆಯನ್ನಾಡುವ ಜನರು ನೆಲಸಿರಲು, ದೇಶಭಾಷೆ ನಾವು ತಾಯಿಯಿಂದ ಕಲಿತ ಭಾಷೆಯಾಗದಿದ್ದರೂ ದೇಶದಲ್ಲಿ ಹೆಚ್ಚು ಜನರು ಉಪಯೋಗಿಸುವ ಭಾಷೆಯಾಗುತ್ತದೆ. ಆಗ ಮನೆಯಲ್ಲಿ, ನಮ್ಮ ಜನರಲ್ಲಿ, ನಾವು ಮಾತೃಭಾಷೆಯನ್ನು ಆಡಿದರೂ ಹೊರಗೆ ಜನ ವ್ಯವಹಾರದಲ್ಲಿ ದೇಶಭಾಷೆಯನ್ನು ಆಡುತ್ತೇವೆ. ಈ ಮಹತ್ವವನ್ನು ತಿಳಿದೆ ನಮ್ಮ ಹಿರಿಯರು 'ದೇಶಭಾಷೆ'ಯೆಂದರೇ ಹೊರತು ಮಾತೃಭಾಷೆಯೆನ್ನಲಿಲ್ಲ. ಮುಖ್ಯಾಂಶವೇನೆಂದರೆ, ಮಾತೃಭಾಷೆಯನ್ನಾಗಲಿ, ದೇಶಭಾಷೆಯನ್ನಾಗಲಿ ಕಷ್ಟಪಟ್ಟು ಶಾಲೆಯಲ್ಲಿ, ಗುರುವಿನಲ್ಲಿ ಕಲಿತು ಆಡುವುದಿಲ್ಲ. ಹುಡುಗರಿಂದಲೇ ಬೆಳೆಯುತ್ತ ಸುತ್ತ ಮುತ್ತ ಆಡುವ ಜನಗಳಿಂದ ಸರಾಗವಾಗಿ ಕಲಿತು ಆಡುತ್ತೇವೆ. ಕನ್ನಡ ದೇಶದಲ್ಲಿ ಕನ್ನಡವೇ ದೇಶಭಾಷೆ"[9] ಎಂದು ಮುಂತಾಗಿ ಹೇಳಿರುವುದು ಈ ನಾಡಿನ ಪ್ರತಿಯೊಬ್ಬ ಪ್ರಜೆ ಗಮನಿಸತಕ್ಕ ಸಂಗತಿಯಾಗಿದೆ. ಭಾಷಾ ಅಲ್ಪಸಂಖ್ಯಾತರು ಇಲ್ಲದ ಕೂಗು ಹಾಕುತ್ತ, ರಾಜಕೀಯ ಮಾಡುತ್ತ, ಕನ್ನಡ ಭಾಷೆ ಇಲ್ಲಿ ಶೈಕ್ಷಣಿಕವಾಗಿ, ಆಡಳಿತಾತ್ಮಕವಾಗಿ ಬೆಳೆಯಲು ಆಗಾಗ ಆತಂಕಗಳನ್ನು ಒಡ್ಡುತ್ತಿರುವುದು ತುಂಬ ವಿಷಾದದ ಸಂಗತಿಯೇ ಆಗಿದೆ. ಅವರು ಶ್ರೀಯವರ ವಿಚಾರಗಳನ್ನು ಸಮುಚಿತ್ತದಿಂದ, ನಿರ್ವಿಕಾರಭಾವದಿಂದ, ವಸ್ತುನಿಷ್ಠವಾಗಿ ತಿಳಿಯಬೇಕಾದ ಅಗತ್ಯವಿದೆಯೆಂದು ಈ ಸಂದರ್ಭದಲ್ಲಿ ಹೇಳಬಹುದು. ಕನ್ನಡ ನಾಡು ಭಾರತದಲ್ಲಿಯ ಒಂದು ಒಳದೇಶ. ಇದನ್ನು ಆಗಲೇ ಗುರುತಿಸಿದ

೬. ಶ್ರೀ ಸಾಹಿತ್ಯ ಪು–೨೫೮
೭. ಅದೇ ಪು–೨೮೬
೮. ಅದೇ ಪು–೨೮೬
೯. ಶ್ರೀ ಸಾಹಿತ್ಯ ಪು–೨೮೬

ಶ್ರೀಯವರು "ಪ್ರತಿಯೊಂದು ಒಳದೇಶಕ್ಕೂ ಒಂದು ಸರ್ಕಾರ ಬೇಕು. ಎಲ್ಲೆಕಟ್ಟು ನಿರ್ಣಯವಾಗಬೇಕು, ದೇಶ ಭಾಷೆ ಅಡಿಪಾಯವಾಗಬೇಕು"[10] ಎಂದು ಹಾರೈಸಿದರು. ಅವರ ಹಾರೈಕೆ ಫಲಿಸಿ ಬಹಳ ದಿನಗಳಾದವು. ಹಾಗಿದ್ದರೂ ಭಾಷೆಯ ಬಗ್ಗೆ ಆಗಾಗ ಗೊಂದಲವೆಬ್ಬಿಸುತ್ತಿರುವುದು ಮಾತ್ರ ನಿಂತಿಲ್ಲ. ವಿವೇಕಿಗಳಾದ ಕನ್ನಡ ನಾಡಿನ ಭಾಷಾ ಅಲ್ಪಸಂಖ್ಯಾತರು ತಮ್ಮನ್ನು ತಾವು ತಿಳಿದುಕೊಂಡು ಕನ್ನಡಿಗರಾಗಿ ಬಾಳುವಂತಹ ದಿನಗಳು ಇಂದಿಲ್ಲ ನಾಳೆ ಬಂದೇ ಬರುತ್ತವೆಂಬುದರಲ್ಲಿ ಸಂದೇಹವಿಲ್ಲ.

ಮಾತೃಭಾಷೆ, ದೇಶಭಾಷೆ, ರಾಷ್ಟ್ರಭಾಷೆ, ದೇವಭಾಷೆ ಹೀಗೆ ನಮ್ಮ ನಾಡಿಗೆ ಪ್ರಸ್ತುತವಾಗಿರುವ ವಿವಿಧ ಬಗೆಯ ಭಾಷಾಬಳಕೆಗಳ ಸಮಸ್ಯೆಯನ್ನು ಕುರಿತು ವಿವರವಾಗಿ ಚರ್ಚಿಸಿ, ಸಂಸ್ಕೃತ, ಇಂಗ್ಲಿಷ್, ಹಿಂದಿ ಇವುಗಳ ಸ್ಥಾನ–ಮಾನಗಳನ್ನು ನಿರ್ದೇಶಿಸಿ 'ಕನ್ನಡ-ನಾಡಿಗೆ ಕನ್ನಡವೇ ಗತಿ' ಎಂಬ ತೀರ್ಮಾನಕ್ಕೆ ಶ್ರೀಯವರು ಬಂದಿರುವರು. ಅವರ ಈ ವಿವೇಚನೆ ಅತ್ಯಂತ ತೂಕವುಳ್ಳದ್ದೂ ಸರ್ವ ಗ್ರಾಹ್ಯವಾದುದೂ ಆಗಿರುವುದನ್ನು ನಾವಿಂದು ಕಾಣುತ್ತೇವೆ.

'ಕನ್ನಡ ನಾಡಿಗೆ ಕನ್ನಡವೇ ಗತಿ, ಅನ್ಯಥಾ ಶರಣಂ ನಾಸ್ತಿ' ಎಂದು ಶ್ರೀಯವರು ಹೇಳಿದ್ದರೂ, ಅವರು ತೆರೆದ ಮನಸ್ಸಿನಿಂದ ಬೇರೆ ಬೇರೆ ಭಾಷೆಗಳ ಶಕ್ತಿ-ಸಾಮರ್ಥ್ಯಗಳನ್ನೂ ಗುರುತಿಸಿದ್ದಾರೆ. ಕನ್ನಡಕ್ಕೆ ಬೇರೆ ಭಾಷೆಗಳಿಂದ ಪಡೆಯಬೇಕಾದದ್ದು, ಅದು ತನ್ಮೂಲಕ ಬೆಳೆಯಬೇಕಾದದ್ದು ಇದೆ ಎಂಬುದನ್ನು ಅವರು ಬಲ್ಲರು. ಇಂಗ್ಲಿಷಿನಿಂದ ನಾವು ಪಡೆದ, ಪಡೆಯುತ್ತಿರುವ ಪ್ರಯೋಜನಗಳನ್ನು ಮನಗಂಡು "ಹೊಸದನ್ನು ಕಲಿಯುವುದರಿಂದ ದೇಶವೂ ಮುಳುಗುವುದಿಲ್ಲ, ಭಾಷೆಯೂ ಕೆಡುವುದಿಲ್ಲ. ಸಸ್ಸಂಪ್ರದಾಯವೂ ಅಳಿಯುವುದಿಲ್ಲ——ಸಂಸ್ಕೃತವನ್ನು ಜೀರ್ಣಿಸಿಕೊಂಡು, ಇಂಗ್ಲಿಷನ್ನೂ ಜೀರ್ಣಿಸಿಕೊಂಡು ಉಳಿದಂತೆ ಉಳಿದು, ಕನ್ನಡವನ್ನು ಉಳಿಸಿ, ಬೆಳೆಸಿ ! ಸಂಸ್ಕೃತದಲ್ಲಿಯೂ ಇಂಗ್ಲಿಷಿನಲ್ಲಿಯೂ ಸಿಕ್ಕದ್ದು ಹಿಂದಿಯಲ್ಲೇನಾದರೂ ಸಿಕ್ಕಿದರೆ ಅದನ್ನೂ ಕೊಳ್ಳಿ."[11] ಎಂದು ಹೇಳಿದ ಅವರ ಮಾತಿಗೆ ಪ್ರತಿ ನುಡಿಯುವಂತಿಲ್ಲ. ಅಷ್ಟು ಸಮರ್ಪಕವಾದುದು ಅವರ ವಿಚಾರಸರಣಿ.

ಕನ್ನಡ ಕಾವ್ಯವನ್ನು ಕುರಿತು ಮಾತನಾಡುವಾಗಲೂ ಶ್ರೀಯವರು ಕನ್ನಡ ಭಾಷೆಯ ಸೊಗಸು–ಸೌಂದರ್ಯ ; ಹಿರಿಮೆ–ಗರಿಮೆಗಳನ್ನು ಕುರಿತು ಏನನ್ನೂ ಹೇಳದೆ ಹೋಗಲಾರರು. ಪಂಪ, ರನ್ನ, ಕುಮಾರವ್ಯಾಸರ, ವಚನಕಾರರ ಭಾಷೆಯ ಬಗ್ಗೆ ಅವರ ಮೆಚ್ಚು ನುಡಿ ಇದ್ದದ್ದೇ. ಅದೆಲ್ಲ ಸಾಹಿತ್ಯ ವಿಮರ್ಶೆಯ ವ್ಯಾಪ್ತಿಯೊಳಗೆ ಬರುವುದರಿಂದ ಆ ಕುರಿತು ಇಲ್ಲಿ ಆಲೋಚಿಸುವುದು ಸಮಂಜಸವೆನಿಸಲಿಕ್ಕಿಲ್ಲ. ಹಾಗಿದ್ದರೂ ನುಡಿಯ ವಿಷಯವಾಗಿ ಕುಮಾರವ್ಯಾಸನನ್ನು ಎತ್ತಿ ಕಟ್ಟಿರುವ ಶ್ರೀಯವರ ವಿಶಿಷ್ಟ ವಿಚಾರವನ್ನು ಗಮನಿಸದಿರಲಿಕ್ಕಾಗದು. ತಿಳಿಗನ್ನಡ ಮತ್ತು ತಿರುಳ್ಗನ್ನಡ ಎಂಬ ವಿಚಾರಕ್ಕೆ ಕವಿಗಳ ಕಾವ್ಯಭಾಗಗಳನ್ನು ಉದಾಹರಿಸುತ್ತ, ಕೆಲವು ಕವಿಗಳ ಕನ್ನಡದ ಮೇಲಿನ ಅನನ್ಯ ಶ್ರದ್ಧೆಯನ್ನು ಎತ್ತಿ ತೋರಿಸುತ್ತ, ಷಟ್ಪದಿ ಮತ್ತು ತ್ರಿಪದಿ ಸಾಂಗತ್ಯಗಳ ಮೇಲ್ಮೆಯನ್ನು ಕುರಿತು ಪ್ರಸ್ತಾಪಿಸುತ್ತ "ಕನ್ನಡ ಕವಿತೆಯ, ಕನ್ನಡ ಶೈಲಿಯ, ರಸದ, ಧರ್ಮದ, ತಿರುಳೆಂದರೆ ಕುಮಾರ ವ್ಯಾಸನ ಭಾರತ. ಯಾರೋ ಒಬ್ಬರು ಪಂಡಿತರು ಕುಮಾರವ್ಯಾಸನು ಕನ್ನಡವನ್ನು ಹಾಳು ಮಾಡಿದನೆಂದು ಅಭಿಪ್ರಾಯಪಟ್ಟರಂತೆ ! ಎಲ್ಲರೂ ಹೀಗೆ ಕನ್ನಡವನ್ನು ಹಾಳು ಮಾಡಬಾರದೆ ! ಕುಮಾರವ್ಯಾಸನಲ್ಲಿ ತಿಳಿಗನ್ನಡ, ತಿರುಳ್ಗನ್ನಡ ಗೆದ್ದಿತು. ಇನ್ನು ಅದಕ್ಕೆ ಭಯವಿಲ್ಲ."[12] ಎಂದು ಹೇಳಿರುವುದು ಒಂದು ಬಗೆಯ ವ್ಯಾಜಸ್ತುತಿಯಾಗಿರುವ ಸ್ಮರಣೀಯ ಮಾತಾಗಿದೆ.

ಶ್ರೀಯವರು ಸಾಹಿತ್ಯ ಪರಿಷತ್ತಿನ ಉಪಾಧ್ಯಕ್ಷರಾಗಿ ಕಾರ್ಯ ನಿರ್ವಹಿಸಿದ್ದು ಕನ್ನಡದ ಮೇಲಿನ ಭಕ್ತಿಯಿಂದಲೇ. ಅವರು ಸರ್ವಸಮರ್ಪಣ ಭಾವದಿಂದ ಪರಿಷತ್ತಿನ ಕನ್ನಡದ ಚಟುವಟಿಕೆಗಳನ್ನು ನಡೆಸಿದ್ದು ಒಂದು ಐತಿಹಾಸಿಕ ದಾಖಲೆಯಾಗಿದೆ. ಪರಿಷತ್ತಿನ ಧ್ಯೇಯ-ಧೋರಣೆಗಳನ್ನು ರೂಪಿಸಿದ, ಅದರ ಕಾರ್ಯ ವ್ಯಾಪ್ತಿಯನ್ನು ಹಿಗ್ಗಿಸಿದ ಶ್ರೇಯಸ್ಸು ಅವರಿಗೆ ಸಲ್ಲುತ್ತದೆ.

---

೧೦. ಅದೇ ಪು–೨೮೭

೧೧. ಶ್ರೀ ಸಾಹಿತ್ಯ ಪು–೨೯೫

೧೨. ಶ್ರೀ ಸಾಹಿತ್ಯ ಪು–೨೯೪

ಅವರಿಂದ ಯೋಜಿತವಾದ ಪರಿಷತ್ತಿನ ಗುರಿಗಳನ್ನು ಈ ಸಂದರ್ಭದಲ್ಲಿ ಗಮನಿಸುವುದು ಸೂಕ್ತವೆನಿಸುತ್ತದೆ.

೧. ಕನ್ನಡವನ್ನು ಬೆಳಸಿ, ಕನ್ನಡ ನಾಡಿನಲ್ಲೆಲ್ಲಾ ಒಂದು ರೂಪಕ್ಕೆ ತಂದು. ಅದರ ಮೂಲಕ ಕನ್ನಡಿಗರನ್ನೆಲ್ಲ ಒಂದು ಗೂಡಿಸುವುದು.
೨. ಈ ಹೊಸ ಕಾಲದಲ್ಲಿ ಕನ್ನಡಿಗರಿಗೆ ಬೇಕಾದ ತಿಳುವಳಿಕೆಯನ್ನೆಲ್ಲಾ ಕನ್ನಡದಲ್ಲಿ ಕೊಟ್ಟು. ಕನ್ನಡ ನಾಡಿನ ಮುನ್ನಡೆಗಾಗಿ ಕೆಲಸ ಮಾಡುವುದು.
೩. ಹಳೆಯ ಸಾಹಿತ್ಯದ ಪ್ರಚಾರ, ಹೊಸ ಸಾಹಿತ್ಯದ ಪ್ರೋಷಣೆ, ವ್ಯಾಸಂಗ ಗೋಷ್ಠಿ. ಪರೀಕ್ಷೆ. ವಿಮರ್ಶೆ, ಪರಿಶೋಧನ.
೪. ಸಮ್ಮೇಳನ, ವಸಂತೋತ್ಸವ. ಉಪನ್ಯಾಸ, ನಾಟಕ. ಗಮಕ ಕಲೆ. ಜನಸಂಸ್ಕೃತಿ. ವಿನೋದ, ಸ್ಪರ್ಧೆ. ಮಕ್ಕಳ ನಲಿವು.
೫. ಕನ್ನಡ ಸಂಘಗಳ ಒಕ್ಕೂಟ ಮತ್ತು ಕೈವಾಡದಿಂದ ಊರೂರು ಹಳ್ಳಿ ಹಳ್ಳಿಗಳಲ್ಲಿ ಬೆಳಕು, ಹುರುಪು. ಹೊಸಬಾಳು. ಹಬ್ಬ.
೬. ಒಂದು ಮಾತಿನಲ್ಲಿ ಕನ್ನಡಿಗರ ಪುನರುಜ್ಜೀವನ[13]

ಈ ಎಲ್ಲ ಗುರಿಗಳು ಸಾಧಿತವಾಗಿದ್ದು, ಶ್ರೀಯವರು ಬಯಸಿದ ಕನ್ನಡದ ಪುನರುಜ್ಜೀವನ ಕಾರ್ಯವೂ ಬಹು ಮಟ್ಟಿಗೆ ಕೈಗೂಡಿದೆ. ಹಾಗಿದ್ದರೂ ಇಂದಿನವರಾದ ನಾವು ಮಾಡಬೇಕಾದ ಕಾರ್ಯ ಬೇಕಾದಷ್ಟಿದೆ. ೧೯೩೬ ರಲ್ಲಿ ಕುವೆಂಪು ಅವರ 'ಕಿಂದರ ಜೋಗಿ ಮತ್ತು ಇತರ ಕವನಗಳು' ಪುಸ್ತಕಕ್ಕೆ ಮುನ್ನುಡಿ ಬರೆಯುತ್ತ ಶ್ರೀಯವರು ಕನ್ನಡಿಗರಿಗೆ ಮಾಡಿಕೊಂಡ ಬಿನ್ನಹ ಇಂದಿನವರೂ ನೆನಪಿಡುವಂತಿದೆ : "———ಕನ್ನಡಿಗರಿಗೆ ಒಂದು ಕಟ್ಟಿಲ್ಲ. ಒಂದು ದೃಷ್ಟಿಯಿಲ್ಲ. ಕನ್ನಡಿಗರು ಒಡೆದಿದ್ದಾರೆ : ಒಡಕು ಬೆಳೆಯುತ್ತಲೂ ಇದೆ : ವಿದ್ಯೆಯಲ್ಲಿ, ಜ್ಞಾನಪ್ರಚಾರದಲ್ಲಿ. ಸಾಹಿತ್ಯದಲ್ಲಿ. ಕನ್ನಡ ದೇಶದ ಎಲ್ಲಾ ಕಾರ್ಯಸ್ಥಾನಗಳಲ್ಲಿ ಕನ್ನಡಕ್ಕಿರಬೇಕಾದ ಪ್ರಧಾನ ಸ್ಥಾನವನ್ನು ಕೊಡಬೇಕೆಂದು ಹೋರಾಡುವವರು ಕೆಲವು ಮಂದಿ ಮಾತ್ರ. ಕನ್ನಡನಾಡಿಗೆ ಕನ್ನಡವನ್ನು ಬಿಟ್ಟು ಗತಿಯಿಲ್ಲ. ಕನ್ನಡ ನುಡಿಯನ್ನು ಬಿಟ್ಟು ಕನ್ನಡ ನಾಡು ಮತ್ತೆ ರೂಪುಗೊಳ್ಳುವಂತಿಲ್ಲ. ಇದರ ಜೀವಾಳವನ್ನು ಜನವೆಲ್ಲಾ ಚೆನ್ನಾಗಿ ಮನದಟ್ಟು ಮಾಡಿಕೊಂಡಿಲ್ಲ."[14] ವಿದ್ಯಾಪ್ರಚಾರದಲ್ಲಿ ರಾಜಕೀಯ ಮಾಡುತ್ತಿರುವ, ಸಾಹಿತ್ಯ ಕ್ಷೇತ್ರದಲ್ಲಿ ಗುಂಪುಗಾರಿಕೆಯನ್ನು ನಿರ್ಮಾಣ ಮಾಡುತ್ತಿರುವ. ಕನ್ನಡಕ್ಕೆ ಪ್ರಧಾನ ಸ್ಥಾನ ದೊರಕಿಸಬೇಕೆಂದು ಹೋರಾಡುತ್ತಿರುವವರಿಗೆ ಅಡ್ಡಗಾಲು ಹಾಕುತ್ತಿರುವ ಒಡಕು ಬುದ್ಧಿಯವರು ಶ್ರೀಯವರ ಕಳಕಳಿಯ ಈ ಬಿನ್ನಹವನ್ನು ಎಷ್ಟು ಸಾಧ್ಯವೋ ಅಷ್ಟು ಬೇಗನೆ ಮನ್ನಿಸಿ. ತಮ್ಮನ್ನು ತಾವು ತಿದ್ದಿಕೊಂಡರೆ ಈಗಿರುವ ಕನ್ನಡದ ಸಮಸ್ಯೆಗಳಿಗೆ ಪರಿಹಾರ ದೊರಕುವುದರಲ್ಲಿ ವಿಳಂಬವಾಗಲಿಕ್ಕಿಲ್ಲ. ಶ್ರೀಯವರು ನಿರೀಕ್ಷಿಸಿದಂತೆ ಆಮೇಲೆ ಕನ್ನಡದ ತೇರು ನಿರಾತಂಕವಾಗಿ. ವೈಭವಯುತವಾಗಿ, ಉತ್ಸಾಹಭರಿತವಾಗಿ ಮುನ್ನಡೆಯುವುದರಲ್ಲಿ ಅನುಮಾನವೇ ಇಲ್ಲ.

ಶ್ರೀಯವರು ಕಾವ್ಯ. ನಾಟಕ, ವಿಮರ್ಶೆ. ಸಾಹಿತ್ಯ ಚರಿತ್ರೆ, ಛಂದಸ್ಸಿನ ಚರಿತ್ರೆ ಮುಂತಾದ ವಿದ್ವತ್ಪೂರ್ಣ ಸಾಹಿತ್ಯ ಸೃಷ್ಟಿಗೇ ತೊಡಗಿದಾಗಲೂ ಅವರ ದೃಷ್ಟಿ ಕನ್ನಡದ ಏಳ್ಗೆ ಹಾಗೂ ಪುನರುಜ್ಜೀವನದ ಕಡೆಗೇ ಇದ್ದುದು ತಿಳಿದು ಬರುತ್ತದೆ. ಅವರು ಕನ್ನಡ ಕಾಂತಿಯನ್ನು ಹೆಚ್ಚಿಸಲು ಬರೆದರು, ಕನ್ನಡದ ಸವಭಿರುಚಿಯನ್ನು ವೃದ್ಧಿಸಲು ಮಾತನಾಡಿದರು.

ಶ್ರೀಯವರ ರಕ್ತ ಕನ್ನಡ. ಪ್ರಾಣ ಕನ್ನಡ. ಅವರೂ ಉಸಿರೂ ಕನ್ನಡವಾಗಿತ್ತು. ಅವರು ಸಂದರ್ಭ ಒದಗಿದಾಗಲೆಲ್ಲ ತಮ್ಮ ಕನ್ನಡದ ಅನುಪಮವಾದ ಶ್ರದ್ಧೆಯನ್ನು ವ್ಯಕ್ತಪಡಿಸುತ್ತಲೇ ಬಂದಿದ್ದಾರೆ. ಅವರ ಮಾತುಗಳು ತಾತ್ಕಾಲಿಕವಾಗಿ ಸಭಾರಂಜನೆಗಾಗಿ, ಸಭಿಕರ ಆಕರ್ಷಣೆಗಾಗಿ ಮೂಡಿದವುಗಳಾಗಿಲ್ಲ ; ಅವರ ಅಂತಃಕರಣದ ನುಡಿಗಳಾಗಿ ಹೊರ ಹೊಮ್ಮಿದವು, ಹೊರ ಚಿಮ್ಮಿದವು. ಅಂತೆಯೇ ಅವು ನಮ್ಮ ಅಂತಃಕರಣವನ್ನು ತಟ್ಟುತ್ತವೆ. ಕರುಳನ್ನು ಕೆದಕುತ್ತವೆ. ಉದಾಹರಣೆಗೆ ಈ ಕೆಲವು ಉಕ್ತಿಗಳನ್ನು ಗಮನಿಸಬಹುದು.

೧೩. ಅದೇ ಪು–೨೯೯
೧೪. ಶ್ರೀ ಸಾಹಿತ್ಯ ಪು–೩೬೯

"ನಿಮ್ಮ ನನ್ನ ಜೀವಮಾನದ ತೀರ್ಪು ನಮ್ಮ ಕನ್ನಡದ ತಾಯಸೇವೆ"

"ಕನ್ನಡ ತಾಯಿಗಾಗಿ ಭಿಕ್ಷೆ ಬೇಡುವ ದಾಸಯ್ಯ ನಾನು"

ಕನ್ನಡ ನನಗೆ ಮುಂದು, ಉಳಿದುದು ಏನಿದ್ದರೂ ಅದರ ಹಿಂದು. ಕನ್ನಡ ಕಾವಲು ನಾಯಿ ನಾನು"

"ನಮ್ಮ ಕುಲ ಕನ್ನಡ ಕುಲ, ಗೋತ್ರ–ಸೂತ್ರಗಳೆಲ್ಲವೂ ಕನ್ನಡವೇ, ನಮಗೆ 'ಕನ್ನಡ ಗೆಲ್ಗೆ'–'ಕನ್ನಡ ಬಾಳ್ಗೆ' ಎಂಬುದೇ ನಿತ್ಯವೂ ಪಠಿಸುವ ಪಂಚಾಕ್ಷರ ಮಂತ್ರ..."

ಈ ವಾಕ್ಯಗಳನ್ನು ಓದುತ್ತಿರುವಾಗ ನಾವು ಖಂಡಿತವಾಗಿಯೂ ಭಾವಪರವಶರಾಗುತ್ತೇವೆ. ಶ್ರೀಯುತರ ಕನ್ನಡದ ಸೇವೆಯ, ಕನ್ನಡದ ಸೊಂಪಿಯ ಚಿತ್ರ ಮತ್ತೆ ಮತ್ತೆ ನಮ್ಮ ಕಣ್ಣು ಮುಂದೆ ಬಂದು ನಿಲ್ಲುತ್ತದೆ. ಅವರ ಧ್ವನಿ ನಮ್ಮ ಹೃದಯದಲ್ಲಿ ನಿರಂತರವಾಗಿ ಮಾರ್ದನಿಗೊಳ್ಳುತ್ತಲೇ ಇರುತ್ತದೆ.



'ಶ್ರೀ'ಯವರು ಸಫೊಕ್ಲೀಸನ 'ಅಜಾಕ್ಸ್' ನಾಟಕವನ್ನು ಮಾದರಿಯಾಗಿಟ್ಟುಕೊಂಡಿದ್ದರೂ 'ಅಶ್ವತ್ಥಾಮನ್' ಸ್ವತಂತ್ರ ಸೃಷ್ಟಿಯೇ ಆಯಿತು. ಪಾಶ್ಚಾತ್ಯ ನಾಟಕಗಳ ಅಧ್ಯಯನದ ಪ್ರಭಾವವನ್ನು ಪಡೆದಿದ್ದ 'ಶ್ರೀ'ಯವರು ನಾವು ಇಂದು ನಾಟಕದಲ್ಲಿ ನಿರೀಕ್ಷಿಸುವ ಬಗೆಯ ಸಂಘರ್ಷವನ್ನು ತಂದುಕೊಟ್ಟರು. ಹಿಂದಿನ ಕನ್ನಡ ಪೌರಾಣಿಕ ನಾಟಕಗಳಲ್ಲಿ ಮುಖ್ಯ ಗಮನ ದೊರೆತದ್ದು ಅವತಾರ ಪುರುಷರ ಅಥವಾ ದೈವಬಲ ಉಳ್ಳವರ ಭಾಗ್ಯದ ಉತ್ಕರ್ಷವನ್ನು ತೋರಿಸುವುದಕ್ಕೆ, ಧರ್ಮಕ್ಕೆ ಜಯ ಎಂಬ ಸೂತ್ರದ ದೃಷ್ಟಾಂತವೇ ಬಹುಮಟ್ಟಿಗೆ ಶ್ರೀಯವರ 'ಅಶ್ವತ್ಥಾಮನ್' ದೈವದ ವಿರುದ್ಧ ನಡೆದವನಿಗೆ ಪತನ ಕಟ್ಟಿಟ್ಟದ್ದು ಎಂಬ ಸೂತ್ರಕ್ಕೆ ದೃಷ್ಟಾಂತವಾಗಿ ನಿಲ್ಲಲಿಲ್ಲ. ಅದರ ಸಂಕೇತವಾಯಿತು. ದೈವದ ವಿಜಯಕ್ಕಿಂತ ಮನುಷ್ಯನ ಸ್ವಭಾವದಲ್ಲಿ ದುಃಖ ದಿಗ್ಭ್ರಾಂತಿಗಳಲ್ಲಿ ಹೆಚ್ಚು ಆಸಕ್ತಿಯನ್ನು ತೋರಿಸಿತು. ಮನುಷ್ಯನನ್ನು ನಾಟಕದ ಕೇಂದ್ರವನ್ನಾಗಿ ಮಾಡಿತು 'ಶ್ರೀ'ಯವರ ಕೃತಿ. ಇದು ಬಹು ಮುಖ್ಯವಾದ ಬೆಳವಣಿಗೆ ಎಂದು ನನಗೆ ತೋರುತ್ತದೆ. ಆರಿಸಿದ ಸಾಮಗ್ರಿಯ ವಿನ್ಯಾಸಕ್ಕೂ ಭಾಷೆಗೂ 'ಶ್ರೀ'ಯವರು ವಿಶೇಷ ಗಮನವನ್ನು ಕೊಟ್ಟರು ಎಂಬುದು ಸ್ಪಷ್ಟ. ವಿದೂಷಕನ ಹಾಸ್ಯವನ್ನು ದೂರವಿಟ್ಟು ಹಾಸ್ಯದ ಬದಲು ಕಟಕಿಯನ್ನು ಬಳಸಿದರು 'ಶ್ರೀ'ಯವರು. ಕಾಲೈಕ್ಯ–ಸ್ಥಳೈಕ್ಯಗಳನ್ನು ಪಾಲಿಸಿದರು. ನಾಟಕದ ಕ್ರಿಯೆಯಲ್ಲಿ ಹಲವು ಎಳೆಗಳನ್ನು ಹೆಣೆಯದೆ ಒಂದೇ ಎಳೆಯನ್ನು ಬಳಸಿಕೊಂಡರು. ಪಾತ್ರಗಳ ಸಂಖ್ಯೆಯನ್ನು ಮಿತಗೊಳಿಸಿ ಕ್ರಿಯೆಯನ್ನು ಮನುಷ್ಯ ಪ್ರಮಾಣ ಮೀರಿದ ಪಾತ್ರಗಳಿಗೆ ಸೀಮಿತಗೊಳಿಸಿದರು.

**ಪ್ರೊ॥ ಎಲ್. ಎಸ್. ಶೇಷಗಿರಿರಾವ್**

(ಕನ್ನಡ ನಾಟಕ : ಪರಂಪರೆ ಮತ್ತು ಪ್ರಯೋಗ)

# ಬಿ. ಎಂ. ಶ್ರೀ ಅವರ 'ಇಂಗ್ಲಿಷ್ ಗೀತಗಳು'-ಒಂದು ಪರಿಶೀಲನೆ

**ಟಿ. ಎನ್. ಗುರುದತ್**

ಕಾವ್ಯಕ್ಕೂ ಅದರ ಭಾಷೆಗೂ ಘರ್ಷಣ ಕರ್ಷಣಗಳು ಇದ್ದದ್ದೇ. ಅಂತರಂಗದ ಖಾಸಾ ಸುಳಿಗಳ ಸೃಷ್ಟಿಗೂ, ಸಾಮಾಜಿಕ ಉಪಕರಣವಾದ ಭಾಷೆಗೂ ಯಾವುದೋ ಸ್ತರದಲ್ಲಿ ಮೈತ್ರಿ ದಕ್ಕಿ. ಕಾವ್ಯ ಅಭಿವ್ಯಕ್ತಿ ಕಂಡುಕೊಳ್ಳ ಬೇಕಾಗುತ್ತದೆ. ಒಳಗು ನಮ್ಮ ವೈಯಕ್ತಿಕತೆಗೆ ಲಗತ್ತಾದರೂ ಅನುಭವ, ಉನ್ಮಾದಗಳು ಬಾಹ್ಯದಲ್ಲಿ ಒಂದು ರೂಪು ಹೊತ್ತು ನಿಲ್ಲುವುದರಿಂದ ಕಾವ್ಯಸೃಷ್ಟಿ ಸಾಮಾಜಿಕ ಕ್ರಿಯೆ. ಅಮೂರ್ತ ಅನುಭವ ಕಾವ್ಯದ ಮೂರ್ತತೆಯನ್ನು ಗಳಿಸುವಾಗ ಭಾಷೆಯ ನಿರ್ಬಂಧ, ಭಾವಪ್ರವಹನಶಕ್ತಿ ಇವೆಲ್ಲದರೊಡನೆ ಸೆಣಸ ಬೇಕಾಗುತ್ತದೆ. ಭಾವ, ಅನುಭವಗಳಲ್ಲಿ ಬೇರಿಳಿಸಿರುವ ಕಾವ್ಯರಚನಾಕ್ರಿಯೆ ಅಂತರ್ಯೇತರ ಅಂಶಗಳೊಡನೆ ಕೂಡಾ ಸಂಕೀರ್ಣ ತಳುಕು ಹಾಕಿಕೊಂಡಿರುವುದರಿಂದ ಕವಿ ಅಭಿವ್ಯಕ್ತಿಗಾಗಿ ಸದಾ ಹವಣಿಸುವ ಗರಜು ಇರುತ್ತದೆ. ಅದ್ದರಿಂದ ಕಾವ್ಯದ ಭಾಷೆ ಕವಿಯ ಸಂದರ್ಭದಲ್ಲೂ, ಯುಗದ ಸಂದರ್ಭದಲ್ಲೂ ಗತಿಶೀಲವಾಗುವುದು ತೀರಾ ಸಹಜ.

ಸೂತ್ರಗಳು ಅಂದುಕೊಂಡ ಅಚ್ಚುಗಳಲ್ಲಿ ಕ್ಲೀಷೆ ಕ್ಲೀಷೆಯಾಗಿ ಶಬ್ದ ಹೊಯ್ಯುವ ಚಟವೇ ಕಾವ್ಯ ನಿರ್ಮಿತಿಯ ಕರ್ಮವಾಗಿ ಹೋಗಿದ್ದ ಈ ಶತಮಾನದ ತೀರ ಆದಿಯಲ್ಲೂ, ಕಳೆದ ಶತಮಾನದ ಅಂತ್ಯದಲ್ಲೂ ಇಂಥ ಗತಿಯ ಅವಶ್ಯಕತೆಯಿತ್ತು. ಹತ್ತೊಂಬತ್ತನೆಯ ಶತಮಾನಾಂತ್ಯದ ಹೊತ್ತಿಗೆ ಹಳೆಯ ಪರಂಪರಾ ಕಾವ್ಯ ಜೀವನ್ಮೃತಾವಸ್ಥೆಗೆ ಸಂದಿತು. ಮುದ್ದಣ ವಗೈರೆ ಪ್ರಭೃತಿಗಳು ಗದ್ಯಕ್ಕೆ ಮನಸೋತಿದ್ದರಿಂದ 'ಪದ್ಯಂ ವಧ್ಯಂ' ಆಯಿತು. ಷಟ್ಪದಿ, ಕಂದಗಳು ಚೈತನ್ಯ ಹೀನ ಭಾಷೆಯಲ್ಲಿ ಚೌಕಟ್ಟು ಪಡೆದು ಸೊರಗ ಹತ್ತಿದವು. ಈ ಸಂದರ್ಭದಲ್ಲಿ ಹೊಸಗನ್ನಡ ಕಾವ್ಯದ ಹಾದಿ ಮಸುಕಾಗಿ ರೂಪುಗೊಳ್ಳತೊಡಗಿತು. ಎಸ್. ಜಿ. ನರಸಿಂಹಾಚಾರ್ಯರೂ, ಪಂಜೆ ಮಂಗೇಶರಾಯರೂ, ಹ. ನಾರಾಯಣರಾಯರೂ ಇಂಗ್ಲೀಷ್ ಕಾವ್ಯವನ್ನು ಕನ್ನಡಕ್ಕಿಳಿಸಲು ಆರಂಭಿಸಿದರು. ಆದರೆ ಇದು ಹೊಸಕಾವ್ಯ ಮಾರ್ಗದ ಪ್ರವರ್ತನೆಯ ತುಡಿತವಾಗಲಿಲ್ಲ. "ಈಗಲೂ ಹೊಸ ಮಾರ್ಗಗಳನ್ನೇಕೆ ತೆರೆಯಬಾರದೆಂದು ಸರಳ ಕಾವ್ಯ ಪ್ರಿಯರು ಕೇಳುತ್ತಾರೆ" ಎನ್ನುತ್ತಾ ಅಂದು ಕಾವ್ಯದಲ್ಲಿ ಹೊಸತನ್ನು ಬಯಸಿದವರ ಪರಿಚಯ ಮಾಡಿಸುವ ಹ. ನಾರಾಯಣರಾಯರು ಕೂಡ ಆವತ್ತಿನ ಕಾವ್ಯ ಚೌಕಟ್ಟಿನಿಂದ ಸಂಪೂರ್ಣವಾಗಿ ಹೊರಬರಲಿಲ್ಲ.

ಈ ತೆರೆದ ಕಾವ್ಯ ಸಂಕ್ರಮಣದ ಕಾಲದಲ್ಲಿ "ಅವಳ ತೊಡಿಗೆ ಇವಳಿಗಿಟ್ಟು ಹಾಡ ಬಯಸಿ" ಬಿ. ಎಂ. ಶ್ರೀಕಂಠಯ್ಯನವರು ಬಂದರು, ವಿಭಿನ್ನ ಛಂದೋಬಂಧದಲ್ಲಿ ಅರ್ಥವಾಗುವ ಶೈಲಿ ಕೊಟ್ಟು ಹಳೆಯ ಕಾವ್ಯಮಾರ್ಗ ಬಿಟ್ಟು ಲವಲವಿಕೆಯ ಪದ್ಯ ಸೃಜನದ ಸಾಧ್ಯತೆಯನ್ನು ನಿರೂಪಿಸಿದರು. ಕನ್ನಡ ಕಾವ್ಯವನ್ನು ಹೊಸದಿಕ್ಕಿಗೆ ತಿರುಗಿಸಿದರು.

ಆದ್ದರಿಂದ 'ಇಂಗ್ಲೀಷ್ ಗೀತೆಗಳ' ಪರಿಶೀಲನೆಗೆ ತೊಡಗುವ ಮುನ್ನ ಖಾತ್ರಿ ಮಾಡಿಕೊಳ್ಳಬೇಕಾದದ್ದು : ಸಾಂದರ್ಭಿಕ ಒನ್ನೆಲೆ ; ಈ ಕೃತಿಯಲ್ಲಿ ಗುಣದೋಷಗಳೇನಿರಬಹುದು, ಕನ್ನಡ ಕಾವ್ಯ ಕ್ಷೇತ್ರಕ್ಕೆ ಇದು ಹರಿಸಿದ ಹೊಸನೀರು : ಈ ಗೆಲುವು ಕೃತಿ ಸುಪ್ತವಾಗಿ ಒಳಗೊಂಡಿರುವ ವಿಶೇಷ ಹೂರಣ "ಎಲ್ಲೋ ಸಂಸ್ಕೃತದಲ್ಲಿ ಬರೆಯುವುದಕ್ಕೆ ಹೊರಟು ಮರೆತು ಕನ್ನಡದ ಪ್ರತ್ಯಯಗಳನ್ನು ಹತ್ತಿಸಿದ ಹಾಗೆ ಕಾಣುವ" ಕನ್ನಡದ ಕಾವ್ಯಕ್ಕೆ ಸಹಜ ಓಟವನ್ನು ದೊರಕಿಸಿದ, ಹೊಸಕನ್ನಡ ಕಾವ್ಯದ ಬೇರುಗಳನ್ನು ಭದ್ರಗೊಳಿಸಿದ ಕೃತಿ ಇಂಗ್ಲೀಷ್ ಗೀತೆಗಳು : ಇದು ಹಲವಾರು ಕವಿಗಳನ್ನೂ, ಅವರ ಶೈಲಿಯನ್ನೂ ರೂಪಿಸಿತು-ಎಂಬುದನ್ನು.

ಶ್ರೀಯವರು ತಮ್ಮ ಅನುವಾದದ ಬಗ್ಗೆ 'ಅರಿಕೆ'ಯಲ್ಲಿ "ಇಂಗ್ಲೀಷ್ ಕಾವ್ಯಮಾರ್ಗವನ್ನು ಕನ್ನಡಿಗರು ಈ ಸಣ್ಣ ಗ್ರಂಥದಿಂದ ಸ್ವಲ್ಪ ಮಟ್ಟಿಗೆ ತಿಳಿಯಬಹುದಾಗಿದೆ. ಭಾಷಾಂತರಕಾರರು ಕೊಲೆಗಾರರು ಎಂದು ಪಾಶ್ಚಾತ್ಯರಲ್ಲಿ ಒಂದು ಗಾದೆಯುಂಟು. ಆ ಅಪವಾದವನ್ನು ತಪ್ಪಿಸಿಕೊಂಡಿರುವೆನೆಂದು ನಾನು ತಿಳಿದುಕೊಂಡಿಲ್ಲ", "ಕೆಲವು ಕಡೆ ಹೆಸರು, ಭಾವ ಮುಂತಾದವು ಕನ್ನಡ ಜನಕ್ಕೆ ಹೊಂದಿಕೆಯಾಗುವಂತೆ ಏರ್ಪಾಡಾಗಿದ್ದರೂ ಸಾಮಾನ್ಯವಾಗಿ ಪದಪ್ರಯೋಗ, ಶೈಲಿ, ಛಂದಸ್ಸು, ಭಾವ, ರಸ– ಇವೆಲ್ಲವೂ ಮೂಲಕವಿಯ ವ್ಯಕ್ತಿತ್ವವನ್ನೇ ಅನುಸರಿಸಿವೆ. ಕನ್ನಡದ ಜಾಯಮಾನವನ್ನು ಮೀರದೆ ಎಷ್ಟು ಮಟ್ಟಿಗೆ ಛಂದಸ್ಸು, ಇಂಗ್ಲೀಷ್ ಛಂದಸ್ಸುಗಳನ್ನು ಹೋಲಬಹುದೋ ಅಷ್ಟು ಮಟ್ಟಿಗೂ ಆ ಪದ್ಯಗಳನ್ನು ಕನ್ನಡಕ್ಕೆ ಇಳಿಸುವುದಕ್ಕೆ ಪ್ರಯತ್ನಪಟ್ಟಿರುತ್ತೇನೆ." ಇದರಿಂದ ಶ್ರೀಯವರ ಆಶಯವೂ, ಅನುವಾದದ ಧೋರಣೆಯೂ ಗೊತ್ತಾಗುತ್ತದೆ. ಆದರೆ ಅವರ ಕಲ್ಪನೆಯ ಅನುವಾದ ಕಲೆ ಇಂಗ್ಲೀಷ್ ಗೀತೆಗಳಲ್ಲಿ ಹೊಮ್ಮಿತೆ ? ಮುಂದೆ ಕೆಲ ಅನುವಾದಗಳನ್ನು ಚರ್ಚಿಸುವುದರಿಂದ ಇದು ತಿಳಿದೀತು.

'ಕಾಣಿಕೆ'ಯಲ್ಲಿ ಶ್ರೀಯವರು ಮುಂದುವರಿದು

"ಪಡುವ ಕಡಲ ಹೊನ್ನ ಹೆಣ್ಣು,
ನನ್ನ ಜೀವದುಸಿರು, ಕಣ್ಣು,
ನಲಿಸಿ, ಕಲಿಸಿ, ಮನವನೊಲಿಸಿ
  ಕುಣಿಸುತಿರುವಳು ;
ಒಮ್ಮೆ ಇವಳು, ಒಮ್ಮೆ ಅವಳು
  ಕುಣಿಸುತಿರುವಳು",

"ಹೀಗೆ ನನಗೆ ಹಬ್ಬವಾಗಿ,
ಇನಿಯರಿಬ್ಬರನ್ನು ತೂಗಿ
ಇವಳ ಸೊಬಗನವಳು ತೊಟ್ಟು,
  ನೋಡ ಬಯುಸಿವೆ ;
ಅವಳ ತೊಡಿಗೆ ಇವಳಿಗಿಟ್ಟು
  ಹಾಡಬಯಸಿದೆ"

ಎಂದು ತಮ್ಮ ಬಯಕೆ ಬಿಚ್ಚಿಡುತ್ತಾರೆ.

ಇಂಗ್ಲೀಷ್ ಗೀತೆಗಳು 60 ಇಂಗ್ಲೀಷ್ ಪದ್ಯಾನುವಾದಗಳನ್ನೂ, 3 ಸ್ವತಂತ್ರ ಕವನಗಳನ್ನೂ ಒಳಗೊಂಡಿದೆ. ಮೊದಲು 1921ರಲ್ಲಿ 'ಇಂಗ್ಲಿಷ್ ಗೀತೆಗಳು' ಹೊರ, ಬಂದಾಗ 12 ಕವನಗಳು ಇದ್ದವು. 1924ರಲ್ಲಿ 24 ಕವನಗಳು ಸಂಕಲನವಾಯಿತು) ಇದರಲ್ಲಿ ಈ ಕವಿಗಳ ಮುಂದೆ ಕಾಣಿಸಿದ ಸಂಖ್ಯೆಯ ಕವನಗಳಿವೆ ; ಅಜ್ಞಾತ–2 ಕ್ಯಾಂಬೆಲಾ–2, ಲೇಡಿ ನಾರ್ಟನ್–1, ನ್ಯಾಷ್–1 ನ್ಯೂಮನ್–1, ಬರ್ನ್ಸ್–7, ಬಾರ್ಬಲ್ಡ್ (ಮಿಸೆಸ್)–1, ಬೆಡ್ಡೋಸ್–1, ಬೈರನ್-2, ಬ್ರೌನಿಂಗ್–3, ರಾಸೆಟ್ (ಮಿಸ್)–1, ಲ್ಯಾಂಡರ್–1, ಲ್ಯಾಂಬ್–1, ಲೇಡಿ ಲೆಂಡ್ಸ್–1, ವರ್ಡ್ಸ್‌ವರ್ತ್–5, ವಾಟಸ್–1, ವುಲ್ಫ್–1, ಷೆಲ್ಲಿ–9, ಷೇಕ್ಸ್‌ಪಿಯರ್–2, ಸ್ಕಾಟ್–3, ಸೌದೆ–2, ಹುಡ್–1, ಹೆನ್ಲೆ–1,ಮತ್ತು ಶ್ರೀಯವರದೇ 3.

ಕೆಲವು ಅನುವಾದಗಳನ್ನು ಕೈಗೆತ್ತಿಕೊಳ್ಳೋಣ.

ನ್ಯೂಮನ್‌ನ Lead, kindly light' ನ ಕನ್ನಡೀಕರಣವು ಸಮರ್ಥವಾಗಿ ಅನುವಾದಿತ ಕವನ ಪಟ್ಟಿಯ ಮೊದಲ ಸ್ಥಾನದಲ್ಲಿ ನಿಲ್ಲುತ್ತದೆ. ಬಹುಶಃ ಮೂಲವನ್ನೂ ಮೀರಿಸುವಂತೆ, ಕವಿಯ ಭಾವನೆಗಳನ್ನು ಶ್ರೀಯವರು ಬ್ಯಂಹಿಸಿದ್ದಾರೆ,

'ಪ್ರಾರ್ಥನೆ' ಹೀಗೆ ಸಾಗಿದೆ :

ಕರುಣಾಳು, ಬಾ, ಬೆಳಕೆ ಮುಸುಕಿದೀ ಮಬ್ಬಿನಲಿ,
  ಕೈ ಹಿಡಿದು ನಡೆಸೆನ್ನನು.
ಇರುಳು ಕತ್ತಲೆಯ ಗವಿ ; ಮನೆದೂರ ; ಕನಿಕರಿಸಿ,
  ಕೈ ಹಿಡಿದು ನಡೆಸೆನ್ನನು.
ಹೇಳಿ ನನ್ನಡಿಯಿಡಿಸು ; ಬಲುದೂರ ನೋಟವನು
ಕೇಳಿನೊಡನೆಯೆ ಸಾಕು ನನಗೊಂದು ಹೆಜ್ಜೆ.

ಮುನ್ನೆ ಇಂತಿರದಾದೆ ; ನಿನ್ನ ಬೇಡದೆ ಹೋದೆ,
  ಕೈ ಹಿಡಿದು ನಡಸು ಎನುತ.
ನನ್ನ ದಾರಿಯ ನಾನೆ ನೋಡಿ ಹಿಡಿದೆನು ;–ಇನ್ನು,
  ಕೈ ಹಿಡಿದು ನಡೆಸು ನೀನು.
ಮಿರುಗುಬಣ್ಣಕೆ ಬೆರೆತು, ಭಯನುರೆತು, ಕೊಬ್ಬಿದೆನು ;
ಮೆರೆದಾಯ್ತು ; ನೆನೆಯದಿರು ಹಿಂದಿನದನೆಲ್ಲ.

ಇಷ್ಟು ದಿನ ಸಲಹಿರುವೆ ಮೂರ್ಖನನು ; ಮುಂದೆಯೂ
  ಕೈ ಹಿಡಿದು ನಡೆಸದಿಹೆಯಾ ?
ಕಷ್ಟದಡವಿಯ ಕಳೆದು, ಬೆಟ್ಟಹೊಳೆಗಳ ಹಾದು,
  ಇರುಳನ್ನು ನೂಕದಿಹೆಯಾ ?
ಬೆಳಗಾಗ ಹೊಳೆಯದೇ ಹಿಂದೊಮ್ಮೆ ನಾನೊಲಿದು
ಈ ನಡುವೆ ಕಳೆಕೊಂಡ ದಿವ್ಯಮುಖ ನಗುತ ?

ಮೂಲ :

Lead, kindly Light, amid the encircling gloom
  Lead Thou me on !
The night is dark, and I am far from home
  Lead Thou me on !
Keep Thou me feet ; I do not ask to see
The distant scene–one step enough for me.

I was not ever thus, nor pray'd that Thou
  Shouldst lead me on.
I loved to choose and see my path, but now
  Lead Thou me on !
I loved the garish day, and, spite of fears,
Pride ruled my will : remember not past years.

So long Thy power hath blest me, sure it
  Will lead me on,
O,er moor and fen, o'er crag and torrent, till
  The night is gone ;
And with the morn those angel faces smile
Which I have loved long since, and lost a while.

ಇದಕ್ಕೆ 'The pillars of the cloud' ಎಂಬುದು ಮತ್ತೊಂದು ಶೀರ್ಷಿಕೆ. ದಕ್ಷಿಣ ಯೂರೋಪ್ ಪ್ರವಾಸಾನಂತರ ಮನೆಯತ್ತ ಬರುತ್ತಿದ್ದ ನ್ಯೂಮನ್‌ನ ಹಡಗು ಪಲೆರಮಾ ಬಳಿ ತೊಂದರೆಗೀಡಾಯಿತು. ಪಯಣಿಗನ ತಾಳ್ಮೆಗೆಟ್ಟಿತು. ತುಮುಲ ಹೆಚ್ಚಿತು. ಒಂದು ದೋಣಿಯೇರಿ ಮತ್ತು ಪ್ರಯಾಣ ಆರಂಭಿಸಿದ. ಅದು ಕೂಡ ಅಡ್ಡಿಯೆದುರಿಸಿತು. ಆಗ ನ್ಯೂಮನ್ ಈ ಕವನ ಬರೆದನು. ತಪ್ಪು ಘಟಿಸಿದ ಮೇಲೆ ಅದಕ್ಕೆ ಕಾರಣವಾಗಿರಬಹುದಾದ ತನ್ನೆಲ್ಲ ದೋಷಗಳನ್ನು ವಿಮರ್ಶಿಸಿಕೊಳ್ಳುವ ಸಂವೇದಿಯ ಸಹಜಗುಣ ಕವಿಯಲ್ಲಿ ಕಂಡು ಬರುತ್ತದೆ.

ಇಲ್ಲಿ ಧಾರ್ಮಿಕ ಅನುಭವಗಳಿವೆ. ಗತಜೀವನದಲ್ಲಿ ಹಲವು ಸ್ತರಗಳಲ್ಲಿ ಬೆಳೆದು, ಗೋಜಲಾಗದ ನಂಬುಗೆ, ಆಧ್ಯಾತ್ಮ ಸಿದ್ಧಾಂತಗಳ ಒಂದು ಮುಖ ಇಲ್ಲಿ ಎದುರುಗೊಂಡಿದೆ.

ಪದ್ಯಕ್ಕೆ 'The pillars of the cloud' ಶೀರ್ಷಿಕೆಯಿರುವುದು ಕವಿಯ ಆತ್ಮಗತ ಹೊಳಹನ್ನು, ಬೈಬಲ್ಲಿನ ಸಂವಾದಿತ್ವವನ್ನು ನಿಚ್ಚಳ ತಿಳಿಸುವಲ್ಲಿ ಮುಖ್ಯ ವಾಗುತ್ತದೆ. ಇದು ಬೈಬಲ್ಲಿನ ಹಳೆಯ ಒಡಂಬಡಿಕೆ, ಎಕ್ಸೊಡಸ್ 13ನೇ ಅಧ್ಯಾಯದಲ್ಲಿ ಬರುತ್ತದೆ. ಯಹೂದಿಯರು ಈಜಿಪ್ಟಿನ ದಾಸ್ಯ ಸಂಕೋಲೆಯಿಂದ ಪಾರಾಗಿ ಮುಂದೆ ದಿಕ್ಕುಗೆಟ್ಟಾಗ, ಭಗವಂತನು ಸ್ತಂಭಾ ಕಾರದ ಮೋಡವೊಂದರಲ್ಲಿ ಮೂಡಿ ಬಂದು ಅವರನ್ನು ಬೆಳಗಿನಲ್ಲಿ ಕಪ್ಪಾಗಿಯೂ ಇರುಳಲ್ಲಿ ಹೊಳೆವ ಬೆಂಕಿ ಯಾಗಿಯೂ ಮುನ್ನಡೆಸುತ್ತಾನೆ.

ಹಾದಿಗೆಟ್ಟ ಕವಿ ಸಹ ಇಂಥದೇ ಒಂದ ಮಾರ್ಗ ದರ್ಶಿಯಾದ ಬೆಳಕಿಗಾಗಿ ಬೇಡಿದ್ದಾನೆ. ವಾಚ್ಯದಲ್ಲೂ, ಧ್ವನಿಯಲ್ಲೂ ಈ ಭಾವನೆ ವ್ಯಾಪ್ತವಾಗಿದೆ. ಮೂಲ ಕ್ಕಿಂತಲೂ ಒಂದು ಕೈ ಹೆಚ್ಚಾಗೇ ಭಾವೋತ್ತುಂಗಕ್ಕೇರಿರುವ ಅನುವಾದ ತುಂಬ ಹೃದ್ಯ. ಮನೆದೂರ, ಕೈ ಹಿಡಿದು ನಡೆಸು ಎನ್ನುವಲ್ಲಿ ಅನುವಾದಕರು 'ಕನಿಕರಿಸಿ'ಲೂ ಬೇಡಿದ್ದಾರೆ. 'The night is dark' ಎಂಬುದು ಇರುಳು ಕತ್ತಲೆಯ ಗವಿಯಾಗಿ ಮೂಲ ಕವಿಯ ಆಶಯ ವನ್ನು ಮತ್ತೂ ಗಂಭೀರವಾಗಿ ವ್ಯಕ್ತಗೊಳಿಸುತ್ತದೆ. ನ್ಯೂಮನ್ ಕೂಡ ಕೇವಲ ಕತ್ತಲಿನಲ್ಲಿ, ಗವಿಯೊಂದರ ಬಂಧನದಲ್ಲಿದ್ದಾನೆ. "ಇನ್ನು ಕೈಹಿಡಿದು ನಡಸು ನೀನು" ಎಂಬಲ್ಲಿ ಕುಸಿಯುತ್ತಿರುವ ಮನುಷ್ಯ ಪರಾಚೇತನ ವೊಂದಕ್ಕೆ ತನ್ನನ್ನು ಅರ್ಪಿಸಿಕೊಳ್ಳಲು ತುಡಿಯುತ್ತಾನೆ. "So long" "ಇಷ್ಟು ದಿನ ಸಲಹಿರುವೆ ಮೂರ್ಖ ನನು—" ಎಂದಾಗಿದೆ. ಇಲ್ಲಿ ಮೂರ್ಖನನು ಉಚಿತ ವೆನಿಸದು. ದೈನ್ಯತೆ, ಅನನ್ಯ ಶರಣತೆ ಪದ್ಯದಲ್ಲಿ ಓತ ಪ್ರೋತಗೊಂಡಿರುವ ಮುಖ್ಯ ಭಾವ. ಮುಂದೆ ಕವಿ "......Sure it will lead me on" ಎಂಬ ವಿಶ್ವಾಸಕ್ಕೆ ಬರುತ್ತಾನೆ. ಕನ್ನಡದಲ್ಲಿ ಈ ವಿಶ್ವಾಸವನ್ನೂ ಮೊರೆಯನ್ನೂ ಒಟ್ಟಿಗೆ ಸಾಧಿಸಲಾಗಿದೆ. 'ನಡಸದಿಹೆಯಾ', "—ನೂಕದಿಹೆಯಾ",—ನಗುತ ?" ಎಂಬಲ್ಲಿ, ಕೃಪೆ ದೋರು ; ಅಷ್ಟನ್ನು ಖಂಡಿತಾ ನೆರವೇರಿಸುವೆ ಎಂಬ ಅರ್ಥಸೂಕ್ಷ್ಮಗಳು ಜತೆಗೊಂಡಿವೆ. ಇದರಿಂದ ಕವಿಯ ಮೂಲ ಅರ್ಥ ನಿಚ್ಚಳವಾಗಿ ಪ್ರಕಟಗೊಂಡಿದೆ. ""Lead thou me on" "ಕೈ ಹಿಡಿದು ನಡಸೆನ್ನನು" ಎಂದಾ ಗಿರುವುದು ಅತ್ಯಂತ ಮನೋಜ್ಞವಾದ ಭಾಷಾಂತರ. ಕೈ ಹಿಡಿದು ಹೆಜ್ಜೆಯಿರಿಸಲು ಕೋರುವ ಕವಿ ದೇವರ ಮುಂದೆ ಶಿಶುಪ್ರಾಯವೆಂಬ ಭಾವನೆ ಸ್ಥಾಪಿತವಾಗುತ್ತದೆ. ಕವಿ ಆಶಿಸುವುದು ಒಂದು ಹ್ಯಾಂಡ್ ಪೋಸ್ಟ್ ಅಲ್ಲ ; ಸ್ನೇಹ, ಕರುಣೆ, ಪ್ರೇಮ ಇವೆಲ್ಲ ಕೂಡಿದ ಪಿತೃ ಭಾವನೆ. ಇವಿಷ್ಟು "ಕೈ ಹಿಡಿದು ನಡಸೆನ್ನನು"ನಲ್ಲಿ ಧ್ವನಿಸುತ್ತದೆ.

ಒಂದೆಡೆ ಮೂಲದ ಆಶಯಕ್ಕೆ ವ್ಯತ್ಯಯ ಬಂದಿದೆ. ನ್ಯೂಮನ್ "amid the encircling gloom" ಎಂದಿದ್ದಾನೆ. ಇಲ್ಲಿ ಮಬ್ಬು ಇನ್ನೂ ಆವರಿಸುತ್ತಲೇ ಇರುವ ನೈರಂತರ್ಯವಿದೆ. ಮುಸುಕುತ್ತಿರುವ ಮಬ್ಬಿನಿಂದ ಕವಿ ಹೊರ ಬರಬೇಕಿದೆ. ಅನುವಾದ "ಮುಸುಕಿದೀ ಮಬ್ಬಿನಲಿ" ಎನ್ನುವಾಗ ಮುಸುಕಿದ ನಿಶ್ಚಲ ಮಬ್ಬಿನ ನಡುವೆ ಕವಿ ಇದ್ದಾನೆ. ಆದರೆ ಅವನು ತೊಳಲುತ್ತಿರು ವುದು ಪ್ರತಿಕ್ಷಣದಲ್ಲೂ ದಟ್ಟೈಸುತ್ತಿರುವ ಮಬ್ಬಿನ ಮಧ್ಯೆ. ಆದ್ದರಿಂದ 'ಮುಸುಕುತಿಹೀ (ಹ) ಮಬ್ಬಿನಲಿ' ಎಂಬರ್ಥದ ಅತ್ಯಗತ್ಯತೆ 'ಪ್ರಾರ್ಥನೆ'ಗಿದೆ. ಕವನದ ಮುಖ್ಯ ಸ್ಥಿತಿ ಇಲ್ಲಿ ಪಲ್ಲಟಗೊಂಡಿದೆ. ಇದು ಶ್ರೀಯವರ ಗಮನನಿಂದ ಹೇಗೆ ತಪ್ಪಿತೋ !

ಆದರೂ 'ಪ್ರಾರ್ಥನೆ'ಯನ್ನು ಓದಿ ಮೂಲವನ್ನು ಓದಿ ದರೆ ನ್ಯೂಮನ್ನನೇ ಶ್ರೀಯವರ ಕೃತಿಯನ್ನು ಅನುವಾದಿಸಿ ಕೊಂಡಿದ್ದಾನೆಂಬ ಭ್ರಮೆ ಮೂಡುವುದು.

"ಕಾರಿ ಹೆಗ್ಗಡೆಯ ಮಗಳು" ಗಮನ ಸೆಳೆಯುವ ಅನುವಾದ. 14 ಚೌಪದಿಗಳ "Lord ullin's daughter" (ಕ್ಯಾಂಬೆಲ್) ಕನ್ನಡದಲ್ಲಿ ಸರಾಗವಾಗಿ ಓಡುತ್ತದೆ. ಪ್ರಿಯಳ ತಂದೆಗೆ ಬೆದರಿ ಓಡಿಬಂದ ಪ್ರೇಮಿಗಳಿಬ್ಬರು ಅಬ್ಬರದ ನೆರೆ ದಾಟಿ ಪರಾರಿಯಾಗ ಹೋಗಿ ಜಲಸಮಾಧಿ ಯಾಗುವುದು ; ಬೆನ್ನಟ್ಟಿ ಬಂದ ಅಳಿಯನನ್ನೊಲ್ಲದ ತಂದೆ ಕಡೆಗೆ ಮನ ಬದಲಿಸಿದರೂ ದುಃಖವಷ್ಟೇ ಅವನಿಗೆ. ಇದು ಕವನದ ವಸ್ತು. ಕತೆಯನ್ನು ಭಾವೋತ್ಕಟವಾಗಿ ಹೇಳುವ ಈ ಕವನದಲ್ಲಿ ಒಳ್ಳೆ ಯತಿ ತುಂಬಿದೆ. ಅನುವಾದ ಬಲು ಮಟ್ಟಿಗೆ ಗಟ್ಟಿಯಾಗಿದೆ.

"......do not tarry !
And I will give thee a silver pound
To row o'er the ferry" ಇದು

"ತಡೆಯದೀಗಲೆ ಗಡುವು ಹಾಯಿಸು
ಕೊಡುವೆ ಕೇಳಿದ ಹೊನ್ನನು"
ಎಂಬ ಪರಿಣಾಮಕಾರೀ ರೂಪ ತಳೆದಿದೆ.

ನೂರನೆ ಪದ್ಯದಲ್ಲಿ "ನಮ್ಮನೀ ಕಣಿವೆಯಲ್ಲಿ ಕಂಡರೆ
ಚಿಮ್ಮಿ ಹರಿವುದು ನೆತ್ತರು" ಎಂಬದು

For should he find us in the glen,
My blood would stain the heather"

ಎಂಬ ಸಾಲುಗಳಾಗಿವೆ.

ಮೂಲದಲ್ಲಿ ಯಾರನೆತ್ತರು ಎಂಬುದು ಸ್ಪಷ್ಟವಾಗಿದೆ. ಕನ್ನಡದಲ್ಲಿ ಅದು ಸಂದಿಗ್ಧವಾಗಿದೆ.

"ಸುಡಲಿ ಹೊನ್ನು, ಬೆಡಗಿ ನಿನ್ನೀ
ಮಡದಿಗೋಸುಗ ಬರುವೆನು" ಎಂಬ ಕನ್ನಡೀಕರಣ ಚೆನ್ನಾಗಿದೆ. ಅವರ ಪ್ರೇಮಕ್ಕೆ ಅಂಬಿಗನ ಬೆಂಬಲ ಪದ ಗಟ್ಟಿದೆ.

ತಂದೆ ಮಗಳನ್ನು ಕಂಡ ಸ್ಥಿತಿಯನ್ನು ಕ್ಯಾಂಬೆಲ್ ಹೇಳಿರುವುದು

"One lovely hand she streched for aid,
And one was round her lover."

ಎಂದು ಇಲ್ಲಿ lovely ವಿಶೇಷಣ. ಒಂದು ಸುಂದರ ಪ್ರತಿಮೆಯನ್ನೇ ಕಡೆದಿದೆ. ಇದು ಶ್ರೀಯವರ ಭಾಷಾಂತರ ದಲ್ಲಿ ಕೇವಲ

"ಒಂದು ಕೈ ನೀಡಿದಳು ನೆರವಿಗೆ'
ಬಂದು ತಬ್ಬಿತು ನಲ್ಲನ!" ಆಗಿ ಬೋಳು ಬೋಳಾಗಿದೆ. ಕ್ಲೈಮಾಕ್ಸ್ ಕೆಟ್ಟಿದೆ.

ಈಗ ಹುಡ್ ಕವಿಯು 'Bridge of sighs'ಗೆ ಬರುವಾ. ತೀನಂಶ್ರೀಯವರ ಪ್ರಕಾರ ಇದರ ಅನುವಾದ (ದುಃಖಸೇತು) ಕನ್ನಡದಲ್ಲಿ ಉತ್ತಮ ಸ್ಥಾನ ಪಡೆದಿದೆ· ಅದು ಬಹುಪಾಲು ನಿಜ. ಇಷ್ಟಾದರೂ ಮೂಲವನ್ನು ಸಂಪೂರ್ಣ ಸೆರೆಹಿಡಿದಿಲ್ಲ ಎಂಬುದೇ ನನ್ನ ಅನಿಸಿಕೆ.

"Look at the garments
clinging like cerements"ಇದು

"ನೋಡು, ಮೈಯೊಳಗುಡಿಗೆ
ತೊಯ್ದು ಹತ್ತಿಹುದು" ಎಂದು ಆಗಿದೆ.

ಇಲ್ಲಿ 'Cerements' ನ ಭಾವ ಕಾಣೆಯಾಗಿ ಮೂಲದ ಉಪಮೆಯ ತೀವ್ರತೆ ಕನ್ನಡದಲ್ಲಿ ಕಾಣೆಯಾಗಿದೆ. ಇದಕ್ಕೆ ಭಾಷೆಯ ಹೊಣೆಯಾ, ಮತೀಯ ಸಂಸ್ಕಾರವು ಕಾರಣ ವಾಗಿರಬಹುದೆ ?

ಎಲ್ಲರ ಎದೆಯನ್ನೂ ಕರಗಿಸುವ ಸಾಲುಗಳಿವು :

"ಆಹ ಎಲ್ಲಡಗಿತೋ
ಆರ್ಯ ಧರ್ಮದ ಕರುಣ
ಆರ್ಯ ಜನಗಳ ಮರುಕ,
ಉರಿಯುವನೆ ಬಲ್ಲ !
ಅಯ್ಯೊ, ಏನನ್ಯಾಯ
ತುಂಬಿದೀ ಊರಲ್ಲಿ,
ಮನೆ ಇವಳಿಗಿಲ್ಲ.
ತುಂಬಿದೀ ಜನದಲ್ಲಿ
ನೆರೆ ಇವಳಿಗಿಲ್ಲ."

ಮೂಲ

Alas ! for the rarity
of christian charity
under the sun !
o! it was pitiful
Near a whole city full
Home she had none"

ಇಲ್ಲಿ 'of Christian Charity under the sun ಎಂಬುದು ಪುಟ್ಟ ಆರ್ಯಧರ್ಮ ಎಂಬುದರಲ್ಲಿ ಅಡಕ ವಾಗಿದೆ, ಎಲ್ಲ ಮತಗಳಲ್ಲೂ ಹೇಳುವುದೊಂದು ಮಾಡು ವುದೊಂದು ಎಂಬುದನ್ನು ಉತ್ತಮವಾಗಿ ಕನ್ನಡದ ಪದ್ಯವೂ ಧ್ವನಿಸಿದೆ. ಶ್ರೀಯವರು ತಮ್ಮ ಸಮಾಧಾನ ಕ್ಕಾಗೋ ಏನೋ ಮೂಲದಲ್ಲಿಲ್ಲದ

"ಸಿರಿ ಹಿಡಿದು, ನಡುವೇರಿ,
ತೊದಳುಮಾತನು ಬೀರಿ,
ಕೊರಗ ನಗಿಸಲು ಬಲ್ಲ
ಮಗುವಿಲ್ಲವೇನೋ ?"

ಎಂದು ಪ್ರಕ್ಷಿಪ್ತ ಮಾಡಿರುವುದು ಸೆಂಟಿಮೆಂಟಲ್ ಆಗಿಬಿಟ್ಟಿದೆ. ಆ ಯುವತಿಯನ್ನು ಉಳಿಸಲು ಶ್ರೀಯವರ ಮನಸ್ಸು ತುಡಿದಿದೆ. ಅವಳು ಹೇಗೆ ಉಳಿದುಕೊಳ್ಳ ಬಹುದಾಗಿತ್ತೆಂದು ತರ್ಕಿಸಿದೆ. ಇದರಿಂದ ಮೂಲದ pathos ಕೆಟ್ಟಿದೆ ಎನ್ನದೆ ವಿಧಿಯಿಲ್ಲ. ಬಹುಶಃ ಕಾಲದ ಅಂತರ ಅವರ ಸಮರ್ಥನೆಗೆ ಬರುವುದೇನೋ.

ಈಗ ಮತ್ತೊಂದು ಮಾದರಿ. ಅಂತರ್ಮುಖಿ ಪಿ. ಬಿ. ಷೆಲ್ಲಿಯ I fear thy kisses, gentle maiden'' (ಇದಕ್ಕೆ 'To –' ಎಂಬ ಪರ್ಯಾಯ ಶೀರ್ಷಿಕೆಯೂ ಉಂಟು) ಕನ್ನಡದಲ್ಲಿ ಸ್ಪಷ್ಟವಾಗಿ ಸೋತಿದೆ. ಕನ್ನಡ ಇಂಗ್ಲಿಷ್‌ಗಳಲ್ಲಿ ಮಹಾ ವಿದಗ್ಧರಾದ ಶ್ರೀಯವರು ಏಕೆ ಸೋತರೋ ಆಶ್ಚರ್ಯ ! ಹೆದರುವೆನು ನಾ ನಿನ್ನ ಬಿನ್ನಾಣ ಕೆಲೆ ಹೆಣ್ಣೆ' ಹೆಸರು ಹೊತ್ತಿದೆ ; ಇದರ ಕನ್ನಡ ರೂಪ. ಅವರ ಕಾಲದಲ್ಲಿ kisses-ಚುಂಬನ ಟ್ಯಾಬೂ ಆಗಿದ್ದಿರಬಹುದೇ ?

ಕನ್ನಡದ ಪೂರ್ತ ರೂಪ :

ಹೆದರುವೆನು ನಾ ನಿನ್ನ ಬಿನ್ನಾಣಕೆಲೆಹೆಣ್ಣೆ,
ಹೆದರದಿರು ನೀನು ನನಗೆ.
ಹೊರಲಾರದರಳಲಿಂದ ನೊಂದವನು ತಂದವನು
ಹೊರಸುವೆನೆ ಹೇಳು ನಿನಗೆ ?

ಹೆದರುವೆನು ನಿನ್ನ ನಗೆ ನಿನ್ನ ನುಡಿ, ನಿನ್ನ ನಡೆಗೆ–
ಹೆದರದಿರು ನೀನು ನನಗೆ.
ಹೊಲ್ಲದರಿಯದ ಹೃದಯದೊಲ್ಮೆಯಲಿ ಸೇವೆಯನು
ಸಲ್ಲಿಸುವೆ ದಾಸ ನಿನಗೆ.

ಮೂಲ :

"I fear thy kises, gentle maiden ;
Thou needest not fear mine ;
My spirit is too deeply laden
Ever to burthen thine.

I fear thy mien, thy tones, thy
motion :
Thou needest not fear mine ;
Innocent is the heart's devotion
With which I worship thine''

ಇಲ್ಲಿ ತನ್ನ ಪ್ರೇಮಿಯ ಬಗೆಗೆ ಕವಿಯದು ಮುಗ್ಧ ಅಕಳಂಕ ನಿಷ್ಕಪಟ ಪ್ರೀತಿ. ಆದರೆ ಪ್ರಿಯತಮಳದು ಅಂಥ ಪ್ರೇಮವೆಂಬ ಖಾತ್ರಿಯಿಲ್ಲ. ಅವಳ ಪ್ರೇಮ, ಉದಾಸೀನ-ಕಾಠಿಣ್ಯಪೂರಿತವಿರಬಹುದು. ಇದು ಕವಿಗೂ ಗುಮಾನಿ, ಆದರೆ ಅವಳಿಗಾಗಿ ಎಂಥ ಬಲಿಗೂ, ಬಲಿದಾನಕ್ಕೂ ತಯಾರು. ಹೃದಯಾಂತರಾಳದಿಂದ ಅವಳನ್ನು ಪ್ರೇಮಿಸುವುದೊಂದೆ ಅಲ್ಲ ಪೂಜೆಯನ್ನೂ ಮಾಡುತ್ತಾನೆ. ಇದು ಕಾವ್ಯವ ಸ್ಥೂಲ ಹರಹು. ಈ ಭಾವ ಕನ್ನಡಕ್ಕೆ ಎಷ್ಟು ದಕ್ಕಿದೆಯೆಂಬುದು ಪ್ರಶ್ನಾರ್ಥಕ. ಮೂರು-ನಾಲ್ಕನೆ ಸಾಲುಗಳು ಮಾತ್ರ ಮೂಲಕ್ಕೆ ತಕ್ಕುದಾಗಿವೆ.

'Kisses' 'ಬಿನ್ನಾಣ'ವಾಗಿದೆ. 'Gentle Maiden, ಕೇವಲ 'ಹೆಣ್ಣೆ' ಆಗಿದೆ. Gentle ನ ಧ್ವನಿ ಸೋರಿ ಹೋಗಿದೆ. 'Mien' 'ನಗೆ'ಯಾಗಿದೆ. 'Maiden' ಎಂಬುದು 'ಕನ್ನೆ' ಎಂದಿದ್ದರೆ ಹಿತವಿತ್ತು. ಮೂಲದಲ್ಲಿನ mine' ಗೆ ನನ್ನ ಪ್ರೇಮ ಎಂದು ಅರ್ಥವಾಗುತ್ತದೆ. ಆದರೆ ಶ್ರೀಯವರು ವ್ಯಕ್ತಿಯನ್ನೇ ಮುಂದು ಮಾಡಿದ್ದಾರೆ. 'Devotion' 'ಸೇವೆ' ಆಗಿರುವುದು ಅನುಚಿತ. ಅವಿನಾಭಾವದ ಪ್ರೀತಿ Devotion ಆಗುತ್ತದೆ. ಕೊನೆಯಲ್ಲಿನ ದಾಸ್ಯಭಾವ ಮೂಲದಲ್ಲಿ ಇಲ್ಲವೇ ಇಲ್ಲ. ಹೀಗೆ ಷೆಲ್ಲಿಯ ಆಶಯದಿಂದ ಅನುವಾದ ಬಹುದೂರದಲ್ಲಿ ನಿಲ್ಲುತ್ತದೆ.

ಬರ್ನ್ಸ್‌ನ 'O my love's like a red, red rose ಅನುವಾದದಲ್ಲೂ ಇಂಗ್ಲಿಷಿನ ಸೂಕ್ಷ್ಮಗಳು, ನವುರು ನಾಜೂಕುಗಳು ಕಾಣೆಯಾಗಿವೆ. ಮೂಲದ ಮುಗ್ಧತೆಯ ಅನುಭವ ಕನ್ನಡದಲ್ಲಿ (ನನ್ನ ಪ್ರೇಮದ ಹುಡುಗಿ) ಸಿಗದೆ ಹೋಗುವುದನ್ನು ತೀನಂಶ್ರೀಯವರೇ ಗುರುತಿಸಿಕೊಟ್ಟಿದ್ದಾರೆ.ಅದರಲ್ಲಿನ 'As fair thou art' 'ಬೆಳೆಬೆಳೆಯುತೆ ಪೈಪ್ಪು ಬಿನ್ನಾಣ' ಆಗಿರುವುದು ಅಸಾಧು ಎಂದು ಈಗ ಎಲ್ಲರೂ ಒಪ್ಪಿದ್ದಾರೆ. ಇದು ಒಂದು ಕವನವಾಗಿ ಉತ್ತಮವಾಗಿದ್ದರೂ ಅನುವಾದವಾಗಿ ಕಂಡಾಗ ಮೂಲದ ಇನ್ನಷ್ಟು ಬೇಕೆನಿಸುವಂತಿದೆ.

ಇವು 'ಇಂಗ್ಲಿಷ್ ಗೀತಗಳ' ಕೆಲವೇ ಕೆಲವು ಮೂಲ-ಅನುವಾದಗಳ ಅವಲೋಕನ. ಗೀತಗಳು ಬಹುಪಾಲು 'ರೊಮ್ಯಾಂಟಿಕ್' ಕವಿಗಳಪಾಲು. ಇದರಿಂದ ತಿಳಿಯದವರು ಇಷ್ಟೆ ಇಂಗ್ಲೀಷ್ ಸಾಹಿತ್ಯದ ಅಂತಃ ಸತ್ವ ಎಂದು ಭ್ರಮಿಸುವ ಸಂಭವವಿದೆ. ಇದು ಪ್ರಾತಿನಿಧಿಕ ಇಂಗ್ಲೀಷ್ ಕವನ ಗುಚ್ಛವಾಗಿದ್ದರೆ ಚೆನ್ನಾಗಿತ್ತು. ನಮ್ಮ ಕನ್ನಡ ಸಂಸ್ಕೃತ ಕವಿಗಳ ಹೆಣ್ಣಿನ ಅನಾಟಮಿಕಲ್ ವರ್ಣನೆ ಓದಿ ಕೇಳಿ ಬೇಸತ್ತಿದ್ದ ಶ್ರೀಯವರಿಗೆ ಇಂಗ್ಲೀಷ್‌ನಲ್ಲಿ ಶೃಂಗಾರವನ್ನು ಹೇಗೆ ಸೂಕ್ಷ್ಮವಾಗಿ, ಯಾರೂ ನಾಚದಂತೆ ಪ್ರಕಟಿಸಿದ್ದಾರೆಂಬುದನ್ನು ತಿಳಿಸುವುದು ಉದ್ದೇಶ.

ಇನ್ನು ಅನುವಾದಗಳಿಗೆ ಮಾರ್ಗ ಸೂಚಿಯಾವುದೂ ಏನು ?

ಗಿಲ್ಬರ್ಟ್ ಮರ್ರೆಗೆ "ಭಾಷಾಂತರ ಮಾಡುವಾಗ

ಅಕ್ಷರಶಃ ಮಾಡುವುದಕ್ಕಿಂತಲೂ ಭಾವದ ಸತ್ವವನ್ನೇ ಹಿಡಿದು ಮೂಡಿಸುವುದು ಮುಖ್ಯ." ಜೆ. ಡಬ್ಲ್ಯು. ಮ್ಯಾಕ್ ಫರ್ಲೇನ್ ರಿಗೆ "ಮೂಲ ಭಾಷೆಯು ಅರಿವಿಲ್ಲದವರಿಗೆ ಭಾಷಾಂತರವು ಭಾಷಾಂತರದಂತೆ ತೋರಕೂಡದು. ಆದರೆ ಮೂಲ ಬಲ್ಲವರಿಗೆ ಪ್ರತಿ ಹಂತದಲ್ಲೂ ಮೂಲವನ್ನು ಗುರುತಿಸಲು ಸಾಧ್ಯವಾಗಬೇಕು" ಆದರೆ ಯಾರೂ ಮೂಲದಲ್ಲಿಲ್ಲದ್ದನ್ನು ಸೇರಿಸಲು ಅಂಗೀಕಾರ ಕೊಟ್ಟಂತಿಲ್ಲ.

ಇಂಗ್ಲೀಷ್ ಗೀತಗಳ ಎಲ್ಲಾ ಕವನಗಳು ಈ ಕಲ್ಪನೆಯ ಅನುವಾದವನ್ನು ಹೊಂದಿಲ್ಲ. ಎಷ್ಟೋ ಕವನಗಳು ಇನ್ನೂ ಬಿಗಿಯಾಗಿ ಹೆಣೆದು ಬರಬೇಕಿತ್ತು. ಶ್ರೀಯವರು ತಮ್ಮ ಅನುವಾದಗಳ ಬಗ್ಗೆ ಪೂರ್ಣ ತೃಪ್ತಿಯನ್ನೇನೂ ಹೊಂದಿರಲಿಲ್ಲ. ಷೆಲ್ಲಿ, ಬರ್ನ್ಸ್. ಸೌದೆ ಮುಂತಾದವರನ್ನು ಅನುವಾದಿಸುವಲ್ಲಿ ಪಾಕ ಕೊಂಚ ಕೆಟ್ಟಿದೆ. ಹುಡ್‌ನ ಅನುವಾದದಲ್ಲಿ ಅನುವಾದಕರ ಸ್ವೋಪಜ್ಞತೆ ನುಸುಳಿದೆ. ಶ್ರೀಯವರ ಜೀವಿತ ಕಾಲದಲ್ಲೆ ವ್ಯಕ್ತಿಪೂಜೆಯನ್ನುಳಿದ ವಸ್ತುನಿಷ್ಠ ವಿಮರ್ಶೆ ದೊರಕಿದ್ದಲ್ಲಿ ಶ್ರೀಯವರು ದ್ವಿತೀಯ ಸಂಸ್ಕರಣದಲ್ಲಿ ಸಾಕಷ್ಟು ಬದಲಾವಣೆ ಮಾಡುತ್ತಿದ್ದರೇನೋ. ಇಷ್ಟಾದರೂ ಈ ಕೃತಿಗೆ ಮಹತ್ವ ಬರುವುದು ಅದು ನವೋದಯದ ಚುಕ್ಕಾಣಿ ಹಿಡಿದಿದ್ದರಿಂದ: ಶೈಲಿ, ರೂಪವಿನ್ಯಾಸ, ಛಂದಸ್ಸುಗಳಲ್ಲಿ ಮುಕ್ತತೆಯನ್ನು ತಂದುಕೊಟ್ಟಿದ್ದರಿಂದ : ಹೊಸ ಹಾದಿಗೆ ಭಾಷೆಯನ್ನು ಹೂಡಿದ್ದರಿಂದ : ಹೊಸ ಪೀಳಿಗೆ ನಿರ್ಮಿಸಿದ್ದರಿಂದ. ಕುರ್ತುಕೋಟಿಯವರು ಹೇಳುವಂತೆ "ಕನ್ನಡ ಕಾವ್ಯವನ್ನು ಮುಂದುವರಿಸುದುದರ ಶ್ರೇಯಸ್ಸು ಈ ಕವನ ಸಂಗ್ರಹಕ್ಕೆ ಸಲ್ಲಲೇಬೇಕಾಗಿದೆ".

ಇವತ್ತಿನ ಪರಾಮರ್ಶನದಲ್ಲಿ ಇದರೊಳಗೆ ಅಂದಿಗೀತ ಎಷ್ಟೋಪಟ್ಟು ದೋಷಗಳು ಸಿಗುತ್ತವೆ. ಸಹಜ. ಕನ್ನಡ ಕಾವ್ಯವಲಯವೂ ವಿಕಾಸಗೊಂಡಿದೆ. ಅನುಭವದ ಎಂಥ ವಿಶೇಷಗಳೂ ಓದುಗನಿಗೆ ನಿಲುಕಬೇಕೆಂಬ ಪ್ರಜ್ಞೆ ಎದ್ದಿದೆ. ವಿಸೀ ಹೇಳುವಂತೆ ಶ್ರೀಯವರು 60–70 ರ ದಶಕದವರಂತೆ ಬರೆಯಲಿಲ್ಲವೆನ್ನುವುದು ಅಸಮಂಜಸವಾಗಬಹುದು. ಆದರೆ ಗೀತಗಳ ಹುಟ್ಟಿನ, ಹೊತ್ತಿನ ಗಾಜು ಧರಿಸಿ ಅಳೆಯುವುದರಿಂದ ಇಂದಿಗೆ ಏನೂ ತಾನೆ ಲಾಭ ? ಈಗ ಈ ಕೃತಿಯ ಪುನರ್‌ಮೌಲ್ಯೀಕರಣಕ್ಕೆ ಇದು ಸಕಾಲ.

"It would be fair to say that Wordsworth revived lofty ideals, Byron brought back a touch of glamour, Shelly again breathed music into poetry and Keats rekindled the fires of beauty" ಎಂಬ ಮಾತಿದೆ.

ಬಿ. ಎಂ. ಶ್ರೀಕಂಠಯ್ಯನವರು 'ಇಂಗ್ಲೀಷ್ ಗೀತಗಳು' ಮೂಲಕ ಇವಿಷ್ಟಕ್ಕೂ ಕನ್ನಡ ಕಾವ್ಯನೆಲದಲ್ಲಿ ಬೀಜ ನೆಟ್ಟರು ; ಸಸಿ ಮಾಡಿದರು.

## ಗ್ರಂಥ-ಲೇಖನ ಋಣ


'ಪ್ರಸ್ತಾವನೆ' (ಇಂ. ಗೀತೆಗಳು)–ತೀನಂಶ್ರೀ
'ಬಿ. ಎಂ ಶ್ರೀಕಂಠಯ್ಯನವರ ಪರಿಚಯ–ಕಾಣಿಕೆ' – ವಿಸೀ
'ಶ್ರೀ ಸಾಹಿತ್ಯ'
The Winged Word, Ed:David Green
'ಮೊದಲಮಾತು' - ವಿಸೀ ('ಅರಲು ಬರಲು')
'ಯುಗಧರ್ಮ ಹಾಗೂ ಸಾಹಿತ್ಯದರ್ಶನ'–ಕುರ್ತಕೋಟಿ
'ಸಂಕ್ಷಿಪ್ತ ಸಾಹಿತ್ಯ ಚರಿತ್ರೆ' : ಎಂ ಮರಿಯಪ್ಪ ಭಟ್ಟ
Preface by J. W. McFarlane (to A doll's House)
'ಹೊಸಗನ್ನಡ ಕವಿತೆಯ ಮೇಲೆ ಇಂಗ್ಲೀಷ್ ಕಾವ್ಯದ ಪ್ರಭಾವ' : ಎಸ್. ಅನಂತನಾರಾಯಣ
ಸಂಭಾವನೆ' (ದ್ವಿತೀಯ ಮೂಲದೀದ)
'ಹೊಸಗನ್ನಡ ಸಾಹಿತ್ಯ' : ಎಲ್. ಎಸ್. ಶೇಷಗಿರಿರಾವ್
Palgrowe's - 'The Golden Treasury'
The Pillars of the cloud - notes by AE and AM ward

# ಹೊಂಗನಸುಗಳು

ಎಂ. ಎಚ್. ಕೃಷ್ಣಯ್ಯ

'ಹೊಂಗನಸುಗಳು' 'ಶ್ರೀ'ಯವರ ಸ್ವತಂತ್ರ ಕವನಗಳ ಸಂಗ್ರಹ. ಮೊದಲ ಆವೃತ್ತಿ ಪ್ರಕಟವಾದದ್ದು 1943ರಲ್ಲಿ. ಅದರಲ್ಲಿ ಹನ್ನೆರಡು ಕವಿತೆಗಳಿದ್ದವು. 1948ರಲ್ಲಿ ಪ್ರಕಟವಾದ ಎರಡನೆಯ ಆವೃತ್ತಿಯಲ್ಲಿ 'ಶಿಲಪ್ಪದಿಗಾರಂ'ಗಾಗಿ ಬರೆದ 'ಮುನ್ನುಡಿ'ಯ ಭಾಗ, ಮದರಾಸಿನಲ್ಲಿ ನಡೆದ 29ನೇ ಸಾಹಿತ್ಯ ಸಮ್ಮೇಳನಕ್ಕೆ ಬರೆದ 'ಹಾರೈಕೆ' ಹೊಸದಾಗಿ ಸೇರಿದುವು. ಇಂಗ್ಲಿಷ್ ಗೀತೆಗಳ ಪ್ರಾರಂಭದಲ್ಲಿ ಸೇರಿಸುವ 'ಕಾಣಿಕೆ' ಕವನವನ್ನು ಗಮನಿಸಿದರೆ ಒಟ್ಟು ಹದಿನೈದು 'ಶ್ರೀ' ಅವರ ಸ್ವತಂತ್ರ ಕವನಗಳು, ಈಗ ಉಳಿದು ಬಂದಿದೆ.

ಹೊಂಗನಸುಗಳಲ್ಲಿನ ಕವಿತೆಗಳನ್ನು ರೂಪ ದೃಷ್ಟಿಯಿಂದ ಮೂರು ಬಗೆಯಾಗಿ ವಿಂಗಡಿಸಬಹುದು : ಪ್ರಗಾಥ, ಭಾವಗೀತೆಗಳು ಮತ್ತು ಯಾವ ವರ್ಗಕ್ಕೂ ಸೇರಿಸಲಾಗದ ಇತರ ತುಣುಕು ಕವಿತೆಗಳು. ವಸ್ತು ದೃಷ್ಟಿಯಿಂದ ದೇಶಭಕ್ತಿ-ರಾಜಭಕ್ತಿ ಗೀತೆಗಳು, ಶೋಕಗೀತೆ ಮತ್ತು ಇತರೆ ಎಂದು ವಿಭಾಗಿಸಬಹುದು. ಇದಿಷ್ಟು ಸ್ಥೂಲ ವಿಂಗಡನೆ.

ಭರತಮಾತೆಯ ನುಡಿ 1914ರಲ್ಲಿ ರಚಿತವಾದದ್ದು, ಮೈಸೂರು ಮಕ್ಕಳು 1921 ರಲ್ಲಿ. ಈ ಎರಡು ಕವನಗಳನ್ನು ಬಿಟ್ಟರೆ ಉಳಿದ ಕವನಗಳೆಲ್ಲ ಇಂಗ್ಲಿಷ್ ಗೀತೆಗಳು ಅಧಿಕೃತವಾಗಿ ವಿಸ್ತೃತವಾಗಿ ಪ್ರಕಟವಾದ ನಂತರ ರಚಿತವಾದುವು ಎಂಬುದು ಗಮನಾರ್ಹ. ಈ ಹಿನ್ನೆಲೆಯಲ್ಲಿ. ಆದರೆ, ಇಂಗ್ಲಿಷ್ ಗೀತೆಗಳನ್ನು ಓದಿ ಅನಂತರ ಹೊಂಗನಸುಗಳನ್ನು ಕೈಗೆತ್ತಿಕೊಳ್ಳುವ ಓದುಗನಿಗೆ ಗೊಂದಲ ಉಂಟಾಗುವುದು ಅತ್ಯಂತ ಸಹಜ. ಇಂಗ್ಲಿಷ್ ಗೀತೆಗಳು ಅನುವಾದವಾದರೂ (ಭಾಷಾಂತರವಲ್ಲ. ಭಾವದ ಸತ್ವವನ್ನು, ಜಾಡನ್ನು ಹಿಡಿದು ರಚಿಸಿದವು ಎಂಬರ್ಥದಲ್ಲಿ) ವಸ್ತುವೈವಿಧ್ಯ, ಮೂಲ ಸಂವೇದನೆಯ ಅಭಿವ್ಯಕ್ತಿ, ಭಾವ ತೀವ್ರತೆ, ಸರಳವಾದ ಆಡುನುಡಿಯ ಬನಿ, ಬಗೆ ಬಗೆಯ ಗುನುಗುನಿಸುವಂತಹ ಲಯಗಳು ಇವು ದಶಕಗಳು ಕಳೆದ ಮೇಲೂ ಮನಸೆಳೆಯುವಂತಹವು. ಕೆಲವು ತೀರ ಸ್ಪಷ್ಟವಾದ ಇಂಗ್ಲೆಂಡಿನ ನಾವಿಕರು, ಆಳೌ, ಬ್ರಿಟಾನಿಯಾ! ಇಂಗ್ಲೆಂಡ್ ಮುಂತಾದ ಕವನಗಳನ್ನು ಬಿಟ್ಟರೆ, ಉಳಿದಂತೆ ಮೂಲವನ್ನು ಸೂಚಿಸದಿದ್ದರೆ ಅನುವಾದಗಳು ಎಂಬ ಸಂಶಯವೂ ಹತ್ತಿರ ಸುಳಿಯದಷ್ಟು ಕನ್ನಡದ ಸ್ವತಂತ್ರ ರಚನೆಗಳು ಎಂಬ ಭಾವನೆಯನ್ನು ಮೂಡಿಸುತ್ತವೆ. ಕಾವ್ಯಾನುಭವ ದೇಶಕಾಲಾತೀತ ಎಂಬ ಮಾತು, ವಿಶ್ಲೇಷಣೆ ಇಲ್ಲಿ ಅನಗತ್ಯ. ಅಥವಾ ಮೂಲದೊಂದಿಗೆ ಹೋಲಿಸಿ ಕವಿ ಎಲ್ಲಿ ಯಶಸ್ವಿಯಾಗಿದ್ದಾರೆ, ಎಲ್ಲಿ ಎಡವಿದ್ದಾರೆ ಎಂಬ ವಿಮರ್ಶೆಯೂ ಅಪ್ರಸ್ತುತ. ಈ ಶತಮಾನದ ಆರಂಭದಲ್ಲಿ, ಕನ್ನಡ ಕಾವ್ಯದ ಸೆಲೆ ಬತ್ತಿ ಹೋಗಿದೆ, ನಿಂತ ನೀರಾಗಿದೆ ಎಂದು ಎನಿಸಿದ್ದ ಕಾಲದಲ್ಲಿ. ಹೊಸ ಮಳೆಗೆ, ಹೊಸ ನೀರಿಗೆ ಎದೆ ಬಿರಿದ ನೆಲ ಕಾದಿದ್ದ ಕಾಲದಲ್ಲಿ, ಅಲ್ಲಿ ಇಲ್ಲಿ ನಡೆದಿದ್ದ ಒಂದೆರಡು ಪ್ರಯೋಗಗಳು ಮುಂಗಾರಾಗಿ ಕವಿಯುದಿದ್ದ ಕಾಲದಲ್ಲಿ, 'ಶ್ರೀ'ಯವರು ಇಂಗ್ಲಿಷ್ ಗೀತೆಗಳನ್ನು ಅನುವಾದಿಸಿ ಹೊಸ ಪರಂಪರೆಯ ದಿಕ್ಕನ್ನು ಸೂಚಿಸಿದರು, ಹೊಸ ಸಂವೇದನೆಗಳಿಗೆ ಮನದ ಮಾರ್ಗವನ್ನು ತೆರೆದರು ಎಂಬುದು ಮುಖ್ಯವಾದ ಮಾತು. ಈ ಅಭಿಪ್ರಾಯವನ್ನು ಒಪ್ಪಿಯೂ ಅವರ ಸ್ವತಂತ್ರ ರಚನೆಗಳನ್ನು ಮುಂದೊಡ್ಡಿ ಹೇಳುವ, 'ಶ್ರೀ'ಯವರು ಕವಿಗಳಲ್ಲ, ಅಭಿಜಾತ ಪ್ರತಿಭೆಯ ಕವಿಗಳಾಗಿರಲಿಲ್ಲ. ಏನಿದ್ದರೂ ಶ್ರೇಷ್ಠ ಅನುವಾದಕರು, ದರ್ಪಣ ಪ್ರತಿಭೆಯಿದ್ದವರು ಎಂಬ ಮಾತೂ ಅಂದಿನಿಂದ ಇಂದಿನವರೆಗೂ ಉಳಿದು ಬಂದಿದೆ.

ಇದು ವಿಚಿತ್ರವೆನಿಸಿದರೂ 'ಶ್ರೀ'ಯವರ ಬಗ್ಗೆ ಮಾತನಾಡುವಾಗ, ವಿಮರ್ಶಿಸುವಾಗ, ಬರೆಯುವಾಗ ಈ ಪ್ರಶ್ನೆ ಕಾಡದೆ ಬಿಡುವುದಿಲ್ಲ. ಸ್ವತಂತ್ರ ರಚನೆಗಳನ್ನು ನೀಡಿದಾತ ಮಾತ್ರ, ಸೃಜನಾತ್ಮಕ ಪ್ರತಿಭೆಯುಳ್ಳ ಕವಿ. ಅನುವಾದಕಾರನಲ್ಲ ಎಂಬುದು ಈ ಅಭಿಪ್ರಾಯದ ಹಿಂದಿರುವ ಉದ್ದೇಶ. ಕವಿಯ ಭಾವಗಳಿಗೆ ಸಮನಾಗಿ ಸ್ಪಂದಿಸಲಾಗದವರನ್ನು ಕವಿಗಳಲ್ಲ ಎನ್ನುವುದಾದರೆ, ಸಹೃದಯರೂ ರಸಿಕರೂ ಆಗಲಾರರು ಎನ್ನುವುದಾದರೆ. ಒಪ್ಪಬಹುದೇನೊ. ಆದರೆ ಕವಿಯ ಭಾವನೆಗಳಿಗೆ ಮಿಡಿದು, ಸಂವೇದನೆಗಳಿಗೆ ಮನ ತೆರೆದುಕೊಂಡು, ಮೂಲದ ಜೀವಧಾತುವನ್ನು, ಒಟ್ಟು ಕಾವ್ಯ ಶಿಲ್ಪದ ಸೌಂದರ್ಯ ಪರಿಣಾಮಗಳನ್ನು ತನ್ನ ಭಾಷೆಯಲ್ಲಿ ಪುನಃ ಸೃಷ್ಟಿ ಮಾಡುವುದು, ಮೂಲ ರಚನೆಯಷ್ಟೇ ಕಾವ್ಯ ಕ್ರಿಯೆಯು ಎಲ್ಲ ಸ್ತರಗಳನ್ನು ಹಾಯ್ದು ಮೂಡಿ ಬರುವಂತಹುದಾಗುತ್ತದೆ ಎಂಬುದು ಗೌಣವಾಗುವುದಿಲ್ಲ. ಕವಿ ಹೃದಯ, ಸೂಕ್ಷ್ಮ ಸಂವೇದನಾ ಶಕ್ತಿ, ಸೃಜನಶೀಲತೆ, 'ಶ್ರೀ'ಯವರಲ್ಲಿ ಇಲ್ಲದಿದ್ದಲ್ಲಿ ಇಂಗ್ಲೀಷ್ ಗೀತೆಗಳು ಈಗಿರುವ ರೂಪ ಪಡೆಯುತ್ತಿರಲಿಲ್ಲ, ಹೊಸತನವನ್ನು ಮಿಂಚುತ್ತಿರಲಿಲ್ಲ. 'ಶ್ರೀ'ಯವರು ನವೋದಯದ ಆಚಾರ್ಯರಾಗುತ್ತಿರಲಿಲ್ಲ. ಅಲ್ಲದೆ ಈ ಆರೋಪಣೆ ಅಥವಾ ಅಭಿಪ್ರಾಯಕ್ಕೆ ಬರಲು ಇರುವ ಆಧಾರವಾದರೂ ಎಷ್ಟು ? ಕೇವಲ ಹದಿನೈದು ಕವಿತೆಗಳು. ಅದೂ ಭಿನ್ನ ದೃಷ್ಟಿ, ಬೇರೆ ಉದ್ದೇಶ, ನಿರ್ದಿಷ್ಟ ಸಂದರ್ಭಗಳಲ್ಲಿ ರಚಿತವಾದುವುಗಳು, ಎಂಬುದನ್ನು ಮರೆಯುವಂತಿಲ್ಲ.

ಇಂಗ್ಲಿಷ್ ಗೀತೆಗಳ ಭಾವ, ಅನುಭೂತಿಯ ತೀವ್ರತೆ, ರೂಪ, ಶಿಲ್ಪ, ಭಾಷೆ, ಛಂದಸ್ಸು, ಲಯಗಳ ಆಕರ್ಷಣೆಯ ಮುಂದೆ ಹೊಂಗನಸುಗಳ ಕವಿತೆಗಳು ಪೇಲವವಾಗಿ ಕಾಣುತ್ತವೆಂಬುದು ನಿಜ. ಅನುವಾದಗಳ ಈ ಕೆಲವು ಉದಾಹರಣೆಗಳನ್ನು ನೋಡಬಹುದು :

ಹಿಡಿದು ಮಂಜು ಬೀಳುತಿತ್ತು, ಚುಕ್ಕಿ ಕಣ್ಣ ಮಿಟುಕುತಿತ್ತು ;
"ಕುಡಿಯೊ ಕಂದ, ಕುಡಿಯೊ" ಎಂದು ನುಡಿವ ಮಾತು
ಕಿವಿಗೆ ಬಿತ್ತು ;
ತಿರುಗಿ ನೋಡಲೊಬ್ಬೆಯಾಚೆ, ಒಬ್ಬಳಲ್ಲಿ ಹೆಣ್ಣು ಮಗಳು
ನೊಗೆಯ ಬಿಳುಪು ಕುರಿಯ ಮರಿಯ ತಲೆಯ ತಡವುತಿದ್ದಳು.
(ಮುದ್ದಿನ ಕುರಿಮರಿ)

ಕಯ್ಯ ಮುಗಿದ, ಕಾಲಹಿಡಿದು
ಹಪ್ಪ ! ಏನು ಬೇಟವೋ !
ರಯ್ಯನೆಂವೆಯೆ, ಹಲ್ಲ ಕಡಿದ,
ಹಪ್ಪ ! ಏನು ಬೇಟವೋ !
ಬೆಚ್ಚಗುಸಿರ ಬಿಟ್ಟ, ಪಾದ,
ಅತ್ತ, ಕಂಗೆಡುತ್ತ ಸಿಡ,
ಹೊಳೆಯ ಬೀಳಲೆಂದು ಹೋದ !
ಹಪ್ಪ ! ಏನು ಬೇಟವೋ !

(ಪಾಪ, ಪಾಪಿ)

ನೆಲವನೊಲ್ಲದೆ ಚಿಗಿದು ಚಿಮ್ಮುತ
ಮೇಲು ಮೇಲಕ್ಕೋಡುವೆ ;
ಒಲೆದು, ದಳ್ಳುರಿಸೆಗೆದು, ಗಗನದ
ನೀಲಿಯಾಳದೊಳಾಡುವೆ ;
ನಲಿದು ಹಾಡುತ ಹಾಡುತೇರುವೆ, ಏರುತೇರುತ ಹಾಡುವೆ.

(ಬಾನಾಡಿ)

ಬೆಳೆಬೆಳೆಯುತೆಷ್ಟೆಷ್ಟು ಬಿನ್ನಾಣ, ಎಲೆ ಚೆಲುವೆ,
ಮುಳುಗಿದೆನು ಅಷ್ಟಷ್ಟು ಪ್ರೇಮದೊಳಗೆ.
ಬತ್ತುವುವು ಕಡಲುಗಳು ಮುಂದಾಗಿ, ಎಲೆ ಚೆಲುವೆ,
ಬತ್ತಲಾರದು ತೊಟ್ಟು ಪ್ರೇಮದೊಳಗೆ.

(ನನ್ನ ಪ್ರೇಮದ ಹುಡುಗಿ)

ಚಿಮ್ಮುತ ನಿರಿಯನು ಬನದಲಿ ಬಂದಳು
ಬಿಂಕದ ಸಿಂಗಾರಿ ;
ಹೊಮ್ಮಿದ ಹಸುರಲಿ ಮರೆಯಿತು ಹಕ್ಕಿ
ಕೊರಲಿನ ದನಿದೋರಿ.

(ಬಿಂಕದ ಸಿಂಗಾರಿ)

ನಿನ್ನ ಗೆಳೆಯನ ಕೂಡಿ ಹಾಡುವೆ,
ನನ್ನ ಹೃದಯವ ಬಿರಿಸುವೆ
ಹೀಗೆ ಕೂಡಿದೆ, ಹೀಗೆ ಹಾಡಿದೆ,
ಆಗ, ಈಗತಿಯರಿಯದೆ !

(ಬಿಟ್ಟ ಹೆಣ್ಣು)

ಊರ ಮನೆ ಬೆಳಕುಗಳು
ದೂರ ಸರಿಯುತ್ತ,
ಕತ್ತಲೆಯ ಹೊಳೆ ಹರಿದು
ಹತ್ತಿರಕೆ ಬರುತ,
ಚಳಿಗಾಳಿ ಸೋಕಿದರೆ
ಬೆಚ್ಚಿ ನಡುಗುವಳು,
ಬೆಚ್ಚಿದಳೆ, ನಡುಗಿದಳೆ,
ಹೆದರಿದಳೆ ಹೊಳೆಗೆ ?

(ದುಃಖ ಸೇತು)

ಪರಿಸೆ ನೋಟವೊ, ಹೊಳೆಯಲೂಟವೊ, ಬಯಲಿನಾಟವೊ,
ಪಾಟವೋ,
ಇರುಳು ಮುಸುಕಿಯು ಮನೆಯ ನೆನೆಯದ ನಮ್ಮ ಲಗ್ಗೆಯ
ಕೂಟವೋ ;
ಎಲ್ಲ ; ಎಲ್ಲಾ ಮಾಯವಾದುವು ಹಳೆಯ ಪಳಕೆಯ ಮುಖಗಳು.

(ಹಳೆಯ ಪಳಕೆಯ ಮುಖಗಳು)

ಮೇಲೆ ಕೆಲವು ಕವನದ ಭಾಗಗಳನ್ನು ಕೊಟ್ಟಿದೆ. ಇವುಗಳ ಸೊಗಸು ಮತ್ತೆ ಎಲ್ಲೊ ಕಂಡಂತೆ, ಹಾಡಿ ಸವಿದಂತೆ ಎನಿಸುತ್ತದೆ. 'ಶ್ರೀ'ಯವರ ಅನಂತರದ ನವೋದಯದ ಕವಿಗಳ ಸ್ವತಂತ್ರ ರಚನೆಗಳಲ್ಲಿ ಕನ್ನಡದ ಈ ಸೊಬಗನ್ನೆ ಪದಗಳ ಲಾಲಿತ್ಯವನ್ನೆ, ಕಲ್ಪನೆಯ ಪ್ರೇಮಂತಿಕೆಯನ್ನೆ, ಲಯದ ನರ್ತನವನ್ನೆ ಹಾಸು ಬೀಸನ್ನೆ ಕಾಣುತ್ತೇವೆ. ಅವು ಸ್ವಂತಸಂವೇದನೆಯ ಫಲಗಳು.ಆದರೆ ಅದೇ 'ಶ್ರೀ'ಯವರ 'ಹೊಂಗನಸುಗಳು' ಸಂಗ್ರಹದಲ್ಲಿ ಬೇರೆಯೇ ಒಂದು ಬಗೆಯ ಕವನಗಳನ್ನು ಕಾಣುತ್ತೇವೆ. ಅನುವಾದಗಳ ವೈವಿಧ್ಯವೂ, ಅನುಭವದ ವಿಸ್ತಾರವೂ. ಆಳವೂ. ಭಾವದ ತೀವ್ರತೆಯೂ ಕಂಡು ಬರುವುದಿಲ್ಲ. ಕವನಗಳ ವಸ್ತು ಸೀಮಿತ : ದೇಶಭಕ್ತಿ, ರಾಜಭಕ್ತಿ, ಕನ್ನಡದ ಪ್ರೇಮ. ಅದೂ ಬೆರಳೆಣಿಕೆಯಷ್ಟು ಕವನಗಳು ಮಾತ್ರ. ಆದ್ದರಿಂದ 'ಶ್ರೀ'ಯವರ ಸ್ವತಂತ್ರ ರಚನೆಗಳಿಗೆ ಶೈಥಿಲ್ಯವನ್ನು ಆರೋಪಿಸುವುದಕ್ಕಿಂತ ಬೇರೆ ಕಾರಣ ಅಥವಾ ಬೇರೆ ಉದ್ದೇಶ 'ಶ್ರೀ'ಯವರದಾಗಿತ್ತು ಎನ್ನಬೇಕಾಗುತ್ತದೆ.

'ಶ್ರೀ'ಯವರ ಸ್ವತಂತ್ರ ಕವನಗಳು ಹೊರಗಿನ ಒತ್ತಡದಿಂದ ರಚಿತವಾದುವು, ಒಳಗಿನ ಒತ್ತಡದಿಂದ ಅಲ್ಲ ಎಂಬ ಅಭಿಪ್ರಾಯವೂ ಇದೆ. ಒತ್ತಡ ಪದ ಅನೇಪಕ್ಷಣೀಯ ಅಸಾಂದರ್ಭಿಕ ಅರ್ಥಗಳಿಗೂ ಎಡೆಮಾಡಿಕೊಡುತ್ತದೆ. ಯಾರೂ ಆಯಾ ಸಂದರ್ಭಗಳಲ್ಲಿ ಬರೆಯಲು ಅವರನ್ನು ಒತ್ತಾಯಿಸಿರಲಿಲ್ಲ. 'ಕನ್ನಡ ತಾಯ್ ನೋಟ'ವನ್ನು ರಚಿಸಿದ ಸಂದರ್ಭವನ್ನು ಎ. ಸೀ. ಅವರು ಹೀಗೆ ವಿವರಿಸಿದ್ದಾರೆ. "ಅದು ವಿಜಯನಗರ ಸಾಮ್ರಾಜ್ಯದ ಷಟ್‌ಶತಮಾನೋತ್ಸವ ನಡೆದ ಸಂದರ್ಭ———ಮೆರವಣಿಗೆ ಹಿಂದಿರುಗುವ ಹೊತ್ತಿಗೆ ಸುಮಾರು ಹನ್ನೆರಡು ಗಂಟೆ. ಹಿಂದಕ್ಕೆ ಬರುವ ಮುಂಚೆ ಅಲ್ಲೆಲ್ಲ ಸಿಕ್ಕಿಕೊಂಡಿದ್ದೆವು, ಇಲ್ಲಿ ಒಂದೆರಡು ಹಾಳೆ ಬಿಳಿಕಾಗದ ಎಲ್ಲಿಯಾದರೂ ಸಿಕ್ಕುತ್ತದೆಯೆ ನೋಡಿ ಎಂದರು 'ಶ್ರೀ'ಯವರು. ನಾನು ಉತ್ಸವ ಸಮಿತಿ ಕಚೇರಿಯ ಗೆಳೆಯರಲ್ಲಿಗೆ ಹೋಗಿ ಎರಡು ಪೂರ್ತಿ Foolscap ಹಾಳೆಗಳನ್ನು ಬೇಡಿ ತಂದೆ. ಊಟಕ್ಕೆ ಎಲೆ ಹಾಕಿ ಬಡಿಸುವುದಕ್ಕೆ ಸುಮಾರು ಅರ್ಧಗಂಟೆ ಅವಕಾಶ ಇತ್ತು ಎನ್ನಿಸಿತು. ಸುರುಳಿ ಸುತ್ತಿ ಕಂಬಕ್ಕೊರಗಿ ಎತ್ತರಕ್ಕೆ ನಿಲ್ಲಿಸಿದ್ದ ಒಂದು ಹಾಸಿಗೆಗೆ ಒರಗಿ 'ಶ್ರೀ'ಯವರು ಆ

ಕವಿತೆಯ ಅರ್ಧಭಾಗಕ್ಕಿಂತ ಹೆಚ್ಚಾಗಿ ಉದ್ದಕ್ಕೆ ಬರೆದರು. ಒಂದಕ್ಷರ ಹೊಡೆದಿರಲಿಲ್ಲ. ಅವರ ಮನಸ್ಸಿನಲ್ಲಿ ಆ ಪಂಕ್ತಿಗಳೆಲ್ಲ ಯಾವಾಗ ರೂಪಗೊಂಡಿದ್ದವೊ ಹೇಳಲಾರೆ. ಆ ದಿನ ಶಕ್ಯವಾದರೆ ತಮ್ಮ ಸಮ್ಮೇಳನಾಧ್ಯಕ್ಷ ಭಾಷಣದಲ್ಲಿ ಆ ಒಟ್ಟು ಪದ್ಯವನ್ನು ಓದಬೇಕೆಂದು ಅವರ ಮನಸ್ಸು, ೧೯೩೮ರಲ್ಲಿ ಕನ್ನಡ ತಾಯಿ ಆಗ ಹಾಗೆ ಕಂಡಿದ್ದರಿಂದ. ಆ ಭಾಗ ಈಗ ಕಾಲಹತವಾಗಿದೆ. ಅದು ಪೂರ್ತಿಯಾಗದ್ದರಿಂದ ಅದನ್ನು ಓದದೆ ತಾಯಿ ರಥವನ್ನೇರಿದಳು ಎಂಬ ಭಾಗದವರೆಗೆ ಮಾತ್ರ ಓದಿ ಭಾಷಣ ಮುಗಿಸಿದರು. ಆ ಪದ್ಯದ ನಡೆಯನ್ನು ನೋಡಬೇಕು." ಮನಸ್ಸಿನಲ್ಲೆ ರಚನೆ ಮುಗಿಸಿ ಬರಹಕ್ಕಿಳಿಸುವ ಅವರ ಮಾರ್ಗದ ಸುಳಿವು ಇಲ್ಲಿ ಸಿಗುತ್ತದೆ. ಹಾಗೆ ನೋಡಿದರೆ 'ಕನ್ನಡ ತಾಯ್ ನೋಟ'ದ ಇಂದಿಗೂ ಅನ್ವಯವಾಗುತ್ತದೆ. 'ಭರತ ಮಾತೆಯ ನುಡಿ' 1914 ರಲ್ಲಿ ರಚಿತವಾದದ್ದು; 'ಮೈಸೂರು ಮಕ್ಕಳು' 1920 ರಲ್ಲಿ-ಅಂದರೆ ಇಂಗ್ಲಿಷ್ ಗೀತೆಗಳ ಅನುವಾದದ ಜೊತೆ ಜೊತೆಗೆ ಇವೂ ಮೂಡಿಬಂದಿದ್ದುವು. ನಾಲ್ಮಡಿ ಕೃಷ್ಣರಾಜ ಒಡೆಯರ ರಜತ ಮಹೋತ್ಸವ ಸಂದರ್ಭಕ್ಕೆ ರಚಿಸಿದ್ದು. ಅದೇ ಹೆಸರಿನ ಪ್ರಗಾಥ. 1927 ರಲ್ಲಿ. 1940 ರಲ್ಲಿ ಅವರು ನಿಧನರಾದಾಗ ಬರೆದ ಶೋಕಗೀತೆ 'ಬಾನ್ ಕೊಂಡ ಕೃಷ್ಣನ್'. ಅನಂತರ ಸಿಂಹಾಸನವೇರಿದ ಶ್ರೀ ಜಯಚಾಮರಾಜೇಂದ್ರರನ್ನು ಕುರಿತದ್ದು 'ಶ್ರೀ ಜಯನ ಬೆಳಕು'. ಮೈಸೂರು ವಿಶ್ವವಿದ್ಯಾಲಯದ ಬೆಳ್ಳಿಯ ಹಬ್ಬದ ಕವಿ ಸಮ್ಮೇಳನಕ್ಕಾಗಿ ರಚಿತವಾದದ್ದು 'ಶುಕ್ರಗೀತೆ' ಪ್ರಗಾಥ. ಪಂಪನ ಸಾವಿರ ವರ್ಷದ ವರ್ಧಂತಿ ಸಂದರ್ಭಕ್ಕಾಗಿ 'ಪಂಪನ ಒರತೆ'ಯನ್ನು ಬರೆದರು.

ಈ ವಿವರಗಳನ್ನು ಗಮನಿಸಿದಾಗ, ರೊಮ್ಯಾಂಟಿಕ್ ಯುಗದ ಕವಿಗಳು ಸೂಕ್ಷ್ಮ ಸಂವೇದನಾಶೀಲ ಮನಸ್ಸಿನ ಒಳ ಒತ್ತಡದಿಂದ, ತುಯ್ತದಿಂದ ಕವನಗಳನ್ನು ಬರೆದಂತೆ ಇವು ರಚಿತವಾದವುಗಳಲ್ಲ ಎಂಬುದು ಸ್ಪಷ್ಟವಾಗುತ್ತದೆ. ಇವು ಸಾಂದರ್ಭಿಕ ರಚನೆಗಳಾದರೂ, ಸ್ಫೂರ್ತಿ ಆವೇಶ ಉದ್ವೇಗಕ್ಕಿಂತ ಹೆಚ್ಚಾಗಿ ಚಿಂತನ ಫಲವಾಗಿ ಮೂಡಿದವು ಎಂಬುದೂ ಗಮನಾರ್ಹ. ಅಲ್ಲದೆ ಈ ಮಾತು ಅವರ ಎಲ್ಲ ರಚನೆಗಳಿಗೂ ಅನ್ವಯಿಸುತ್ತದೆ. 'ಶ್ರೀ'ಯವರು ಪ್ರಧಾನತಃ ಪ್ರಯೋಗಶೀಲ ಪ್ರವೃತ್ತಿ. ಭಾವಗೀತೆಗಳ ಪ್ರಯೋಗವಂತೂ ಇದ್ದದ್ದೇ. ಹಾಗೇ ಗ್ರೀಕ್ ರುದ್ರ ನಾಟಕಗಳ ಸೌಂದರ್ಯವನ್ನು ಮೂರು ಬಗೆಯಾಗಿ ಮೂರು ನಾಟಕಗಳ ಮೂಲಕ ನೀಡಿರುವುದೂ ಇದಕ್ಕೆ ಸಾಕ್ಷಿ. ಒಂದು ರೂಪಾಂತರ, ಒಂದು ಭಾಷಾಂತರವಾದರೆ, ನಮ್ಮ ಪ್ರಾಚೀನ ಕಾವ್ಯಗಳಲ್ಲೆ ದುರಂತ ವಸ್ತು ಅಡಗಿರಬಹುದು ಎಂಬುದನ್ನು ಬಿಡಿಸಿ, ಅಡಕಗೊಳಿಸಿ, ಕೊಂಡಿಸಿದ ನಾಟಕ 'ಗದಾಯುದ್ಧ'. ಅಪೂರ್ಣವಾಗಿ ಉಳಿದ ಅವರು ಬರೆದ ಸಾಹಿತ್ಯ ಚರಿತ್ರೆಯೂ ರಸಾಸ್ವಾದನೆಗೆ ಅನುವು ಮಾಡಿಕೊಡಬಹುದಾದ. ಹೊಸ ದೃಷ್ಟಿಯಿಂದ ಪ್ರಾಚೀನ ಕಾವ್ಯವನ್ನು ತೂಗಿನೋಡಬಹುದಾದ ಸಾಹಿತ್ಯ ಚರಿತ್ರೆಯ ಒಂದು ಮಾದರಿಯೇ. ಶಾಸ್ತ್ರ ವಿಷಯಗಳ ಬಗೆಗಿನ ರೀತಿಯನ್ನು ಛಂದಸ್ಸಿನ ಚರಿತ್ರೆಯಲ್ಲಿ ಕಾಣಬಹುದು. ಆ ಕಾರಣ ಅವರ ಪ್ರಯೋಗ ಶೀಲ ಮನೋವೃತ್ತಿ ಆಗಾಗ್ಗೆ ಬರೆದ ಒಂದೊಂದು ಸ್ವತಂತ್ರ ಕವಿತೆಗಳಲ್ಲೂ ಕಂಡು ಬರುತ್ತದೆ ಬಾನಾಡಿ ಅಂತಹ ಒಂದೆರಡು ಕವನಗಳ ಹೊರತು, ಓಡ್ ಹಾಗೂ ಎಲಿಜಿಯ ಪ್ರಯೋಗಗಳು ಹೊಂಗನಸುಗಳಲ್ಲಿ ಕಂಡು ಬರುತ್ತವೆ. ಭಾವಗೀತೆಗಳ ಇನ್ನೆರಡು ರೂಪಗಳನ್ನು ಇಲ್ಲಿ ಕಾಣುತ್ತೇವೆ. ಭಾವಗೀತೆಗಳಿಗೇ ಮಾದರಿಯಾಗಿ ಸ್ವಂತವಾಗಿ ರಚಿಸಿದ ಕೃತಿಗಳು ಇಲ್ಲಿಲ್ಲ. ಬಹುಶಃ ಆ ಉದ್ದೇಶವೂ ಅವರಿಗೆ ಇದ್ದಿರಲಾರದು.

ಇನ್ನು ಹೊಂಗನಸುಗಳಲ್ಲಿ ಇಲ್ಲದ, ಅವರು ರಚಿಸದೆ ಬಿಟ್ಟ, ಅವರು ರಚಿಸಬೇಕಾಗಿತ್ತು ಎಂದು ಎಲ್ಲರೂ ಅಂದುಕೊಂಡ ಸ್ವತಂತ್ರ ಕವಿತೆಗಳ ಬಗ್ಗೆ ಒಂದು ಮಾತು. 'ಶ್ರೀ'ಯವರ ಈ ಅರೆಕೊರೆಗೆ ಒತ್ತು ಹೆಚ್ಚಾಗುತ್ತಿದೆ. ಈ ಕೊರತೆಯೇ ಅವರ ಸೃಜನಶೀಲಶಕ್ತಿಯ ಬಗೆಗೂ ಒಡಕು ದನಿ ಬರಲು ಕಾರಣವಾಗಿದೆ. 'ಶ್ರೀ'ಯವರು ತಮ್ಮ ಶಿಷ್ಯರು, ಕಿರಿಯರು ಬರೆಯಲು ಮಾರ್ಗ ತೋರಿ, ಪ್ರೋತ್ಸಾಹಿಸಿ, ಅವರು ಬರೆದಾಗ ಮೆಚ್ಚಿ ಸಂತೋಷಪಟ್ಟಂತೆ ತಾವೂ ಸ್ವತಃ ಅಂತಹ ಕವಿತೆಗಳನ್ನು ರಚಿಸಬಹುದಾಗಿತ್ತಲ್ಲ. ಏಕೆ ರಚಿಸಲಿಲ್ಲ? ಅವರಿಗೆ ಕಾವ್ಯಸೃಷ್ಟಿಗೆ ಬೇಕಾದ ಒಳಗಿನ ಒತ್ತಡ ಇರಲಿಲ್ಲವೆ? ಈ ಪ್ರಶ್ನೆಗಳು ಕೆಲವರಿಗೆ ಅಪ್ರಸ್ತುತ. ಅಧಿಕ ಪ್ರಸಂಗಿತನ ಎನಿಸಿದರೆ, ಕೆಲವರಿಗೆ ಬಹು ಮುಖ್ಯವಾದ ವಿಷಯ ಎಂದೂ ತೋರಿದೆ. 'ಶ್ರೀ'ಯವರು ಕರ್ನಾಟಕದ ಎಲ್ಲೆಡೆ ಓಡಾಡಿದವರು, ಕರ್ನಾಟಕದ ನಿಸರ್ಗ ಸೌಂದರ್ಯವನ್ನು ಸವಿದವರು. ಪ್ರಕೃತಿ ಪ್ರೇಮದಿಂದ ಅವರು ಹೊರತಾದ

ವರೇನೂ ಅಲ್ಲ. "ಅಶ್ವತ್ಥಾಮನ್" ನಾಟಕದಲ್ಲಿ ಬರುವ ಬನವಾಸಿಯ ವರ್ಣನೆ ನಿಸರ್ಗದ ಸೆಳೆತ ಪ್ರಸಿದ್ಧವಾದದ್ದು. ಹೊಂಗನಸುಗಳ ಕವಿತೆಗಳಲ್ಲೂ ಅಂತಹ ವರ್ಣನೆಗಳು ನಡು ನಡುವೆ ಕಾಣಸಿಗುತ್ತವೆ. ಒಂದು ಉದಾಹರಣೆ :

ಮೆಲ್ಲ ಮೆಲ್ಲನೆ ತೇಲಿ, ಆಳದಲಿ ಮುಳುಗಿಮೆಯ್ಯೂಳಲುಗಿ
ಅಲುಗಿ
ಕಡಿದು ಬಂಡೆಗೆ ಬಂದು, ನೆಗೆದು ಬೆಳ್ಳಂಗೆಡೆವ ನೀರ್‌ಬೀಳ
ಬೆಳ್ಪು !
ಕಡೆದ ಸೊರೆ, ಚಿಗಿವ ಸೊರೆ, ತೂರುವ ಸೊರೆ, ಕುದಿವ ಸೊರೆ
ಬೆಳ್ಳಿ ಸೊರ್ ಬೆಳ್ಪು !
ಆ ಬೆಳ್ಪು, ಆತೆಳ್ಪು, ಆ ಮೆಲ್ಪು–ನಿನ್ನ ಮಕ್ಕಳ ಬಾಳಿನೊಲ್ಪು ;
ನೀರ್‌ಬೀಳ ಬೆಳ್ನೊರೆಯ ಬಿಸಿಲ ಬೆಳ್ದಿಂಗಳಾ ಮಳೆ ಬಿಲ್ಲ ತಳ್ಪು !
(ಕನ್ನಡತಾಯಸೊಬಗು)

'ಶ್ರೀ'ಯವರು ತಮ್ಮ ಸ್ವಂತ ವಿಷಯಗಳ ಬಗ್ಗೆ ಯಾರೊಂದಿಗೂ ಹೇಳಿಕೊಳ್ಳುತ್ತಿರಲಿಲ್ಲ. ಅವರ ಬದುಕಿನಲ್ಲಿ ಅವರು ಕಂಡುಂಡ ನೋವುಗಳು' ಮನೆಯಲ್ಲಾದ ದುಃಖಕರ ಘಟನೆಗಳು (ದುರಂತ ಎನ್ನಲೂ ಬಹುದಾದವು), ವೃತ್ತಿ ಜೀವನದಲ್ಲಿ ಕಾಣಿಸಿಕೊಂಡ ಆಶೆನಿರಾಶೆಗಳಿಗೇನೂ ಕಡಿಮೆಯಿಲ್ಲ. ಅವುಗಳಿಂದ ಎದ್ದ ಮೂಕ ಸಂಕಟ, ತುಮುಲ ತುಯ್ತಗಳಿಗೆ ಶಬ್ದರೂಪ ಕೊಟ್ಟಿದ್ದರೆ ಶ್ರೇಷ್ಠ ಭಾವಗೀತೆಗಳಾಗುತ್ತಿದ್ದವು. ವೈಯಕ್ತಿಕವಾದ ಭಾವಾನುಭೂತಿ ಏಕಕಾಲಕ್ಕೆ ಸಾರ್ವತ್ರಿಕ ಅನುಭವವಾಗಿ ಭಾವಗೀತೆಗಳಲ್ಲಿ ಹೇಗೆ ರೂಪ ತಳೆಯುತ್ತವೆ ಎಂಬುದನ್ನು, ಇಂಗ್ಲೀಷಿನ ಕೃತಿಗಳನ್ನು ಪಾಠ ಹೇಳಿದ, ಸಾಹಿತ್ಯವೇ ಜೀವನವಾದ ಅವರಿಗೆ ಚೆನ್ನಾಗಿಯೇ ತಿಳಿದಿತ್ತು. ಆದರೂ ಏಕೋ ಸ್ವಂತ ಜೀವನದ ನೋವು ನಲಿವುಗಳನ್ನು, ಬದುಕಿನ ಚಿಂತನೆಯನ್ನು ನೇರವಾಗಿ ಹೇಳುವ ಮನಮಾಡಲಿಲ್ಲ ; ಹತ್ತಿಕ್ಕಿ ಪಕ್ಕಕ್ಕೆ ಸರಿಸಿಟ್ಟರು. ಕೆಲವೊಮ್ಮೆ ತೀವ್ರ ಅನಿಸಿಕೆಗಳು ರಚಿಸಿದ ಕೃತಿಗಳಲ್ಲಿ, ಅನುವಾದಗಳಲ್ಲೆ ಅಲ್ಲಲ್ಲಿ ನುಸುಳಿ ಹೊರಹೊಮ್ಮಿರುವುದನ್ನು ಕಾಣಬಹುದು. ಮನೆಯಿಂದ ದುಃಖದ ಸುದ್ದಿ ಬಂದಾಗಲೂ ತರಗತಿ ಬಿಡದೆ, ಆ ಪೀರಿಯಡ್ಡು ಪೂರ್ತಿ ನಿರ್ವಿಕಾರದಿಂದ ಮೊದಲಿನಂತೆಯೇ ಪಾಠ ಮುಗಿಸಿ, ಅನಂತರ ಮನೆಗೆ ಹೋದರೆಂದು ಕೇಳಿದ್ದೇನೆ, ಹೀಗೆ ತಮ್ಮ ವೈಯಕ್ತಿಕ ನೋವನ್ನು ತೋರಗೊಡದೆ, ಕರ್ತವ್ಯ ಮುಗಿಸುವ ಕಡೆ ಮನ ಮಾಡುವ ಅವರ ಕಟ್ಟುನಿಟ್ಟಾದ ಶಿಸ್ತಿನ ಪ್ರವೃತ್ತಿಯೂ ಬಹುಶಃ ಸ್ವತಂತ್ರ ರಚನೆಗಳಿಗೆ ತೊಡಕಾಗಿ ನಿಂತಿತೇನೊ ಎನಿಸುತ್ತದೆ. ಕನ್ನಡಕ್ಕಾಗಿ ಅರ್ಪಿಸಿಕೊಂಡ ಅವರ ಬದುಕು ಶ್ರೀಮಂತ ಬೆಳೆ ತೆಗೆಯಲು ಅವಶ್ಯವಾದ ಸಿದ್ಧತೆಗೇ ಮುಡಿಪಾಯಿತು. ಇದು ವಿಷಾದವಾದರೂ ಎಳೆ, ಸುಳಿವು ಹಿಡಿದು ಸಮಾಧಾನ ಕಂಡುಕೊಳ್ಳಬಹುದಾದ ಮಾತು. ಎ. ಎನ್. ಮೂರ್ತಿರಾಯರು ಒಂದು ಕಡೆ ಹೇಳುವಂತೆ "ನಡೆಯದೆ ಹೋದದ್ದು ನಡೆದಿದ್ದರೆ, ಇಲ್ಲದೆ ಹೋದದ್ದು ಇದ್ದಿದ್ದರೆ ಏನಾಗುತ್ತಿತ್ತು ಎನ್ನುವ ಪ್ರಶ್ನೆ (ಅದೂ ಸಾಹಿತ್ಯವನ್ನು ಕುರಿತ ಪ್ರಶ್ನೆ !) ಕೇಳುವುದು ಹುಚ್ಚುತನ. ಸರಸ್ವತಿ ಯಾವ ಘಳಿಗೆಯಲ್ಲಿ ಯಾರಿಗೆ ಯಾವ ಪ್ರಮಾಣದ ವರ ಕೊಡುತ್ತಾಳೆ ಎಂಬುದನ್ನು ಯಾರೂ ಅರಿಯರು." ಮುಂದುವರಿದು 'ಅಶ್ವತ್ಥಾಮನ್' ಬಗ್ಗೆ ಹೇಳುತ್ತ ಅವರ ಪ್ರತಿಭೆಯನ್ನು ಕುರಿತು ಮಾಡುವ ವಿಶ್ಲೇಷಣೆ 'ಹೊಂಗನಸುಗಳು' ಸಂದರ್ಭಕ್ಕೂ ಪರೋಕ್ಷವಾಗಿಯಾದರೂ ಅನ್ವಯಿಸುವಂಥದೆ, ಇಂಗ್ಲಿಷ್ ಗೀತೆಗಳ ಬಗೆಗೂ ಅರ್ಥಪೂರ್ಣ ಎನ್ನಬಹುದು : "'ಶ್ರೀ'ಯವರ ಪ್ರತಿಭೆ ಮಹಾಕೃತಿಯೊಂದರ ಲಯಕ್ಕೇ ಸರಿಯಾಗಿ ಮಿಡಿಯಬಲ್ಲುದು. ಅದರ ಕರೆಗೆ ಓಗೊಡಬಲ್ಲುದು : ಆದರೆ ತಾನೇ ಆ ಮಟ್ಟದ ಕೃತಿಯನ್ನು ಸೃಷ್ಟಿಸಲಾರದು– ಬಹುಶಃ ಇದು ಅವರ ಪ್ರತಿಭೆಯ ಗುಣ. ಅದನ್ನು ಸೃಷ್ಟಿಶಕ್ತಿಯುಳ್ಳ ಪ್ರತಿಭೆ (Creative imagination) ಎನ್ನುವುದಕ್ಕಿಂತ ಸೃಷ್ಟಿ ಶಕ್ತಿಗೆ ಪ್ರತಿ ಸ್ಪಂದನ ಕೊಡಬಲ್ಲ ಪ್ರತಿಭೆ (Responsive imagination) ಎಂದರೆ ಸರಿಹೋದೀತೇನೊ. ನಾನು ಇಲ್ಲಿ ಲಕ್ಷಣ (definition) ಹೇಳುತ್ತಿಲ್ಲ. ಅವರ ಪ್ರತಿಭೆಯನ್ನು ಬಣ್ಣಿಸುತ್ತಿದ್ದೇನೆ ಮಾತ್ರ. ಮೇಲೆ ಹೇಳಿದ ಎರಡೂ ಬೇರೆ ಬೇರೆ ಜಾತಿಯ ಪ್ರತಿಭೆಗಳು ಎಂದರೆ ಮನಶ್ಶಾಸ್ತ್ರ ಒಪ್ಪುವುದಿಲ್ಲ. ಅವೆರಡಕ್ಕೂ ಇರುವ ವ್ಯತ್ಯಾಸ ಪ್ರಮಾಣದ್ದು. ಜಾತಿಯದಲ್ಲ. Responsive ಮಟ್ಟದಲ್ಲಿ ಅವರ ಪ್ರತಿಭೆ ಅದ್ಭುತವಾದ ಕೆಲಸ ಮಾಡಬಲ್ಲದು—ದೇಶಪ್ರೇಮ, ಭಾಷಾಪ್ರೇಮ, ಸಾಹಿತ್ಯ ಪ್ರೇಮಗಳು ಎಷ್ಟೋ ಕವಿಗಳನ್ನು ಆಕರ್ಷಿಸಿವೆ. ಶ್ರೀಯವರ ಕವಿತೆ ಆ ಕ್ಷೇತ್ರಕ್ಕೆ ಸೀಮಿತವಾದಂತೆ ತೋರುತ್ತದೆ. ಜೀವನದ ನೂರೆಂಟು ಆಸೆಗಳೂ ಸುಖದುಃಖಗಳೂ ಅವರನ್ನು ಕಾವ್ಯಸೃಷ್ಟಿಗೆ ಪ್ರೇರಿಸಲಿಲ್ಲ."

ಭಾಷಾ ದೃಷ್ಟಿಯಿಂದ ನೋಡಿದಾಗಲೂ ಇಲ್ಲಿನ ಕವಿತೆ

ಗಳು 'ಅಶ್ವತ್ಥಾಮನ್' ಮತ್ತು 'ಪಾರಸಿಕರು' ನಾಟಕಗಳ ಭಾಷಾ ಶೈಲಿಗೆ ಹೆಚ್ಚು ಹತ್ತಿರವಾಗಿವೆ. ಇಂಗ್ಲಿಷ್ ಗೀತೆಗಳ ಸರಳ ಅಚ್ಚಗನ್ನಡ, ಆಡುನುಡಿಯ ಸೊಬಗು, ಬನಿ ಇಲ್ಲಿಲ್ಲ.

ಮೊದಲೆ ಹೇಳಿದಂತೆ 'ಹೊಂಗನಸುಗಳು' ಸಂಗ್ರಹದಲ್ಲಿರುವ ಎರಡು ಕವಿತೆಗಳನ್ನು ಹೊರತುಪಡಿಸಿದರೆ, ಶಿಲಪ್ಪದಿಗಾರದ ಮುನ್ನುಡಿ ಮತ್ತು ಹಾರೈಕೆ, ಉಳಿದ ಹನ್ನೆರಡು ಕವನಗಳು ದೇಶಪ್ರೇಮ, ರಾಜಭಕ್ತಿ, ಕನ್ನಡ ನಾಡು ನುಡಿಯನ್ನು ಕುರಿತಾದವು. 'ಶಿಲಪ್ಪದಿಗಾರಂ'ನ ಕನ್ನಡ ಭಾಷಾಂತರಕ್ಕೆ ಬರೆದ 'ಮುನ್ನುಡಿ'ಯ ಹದಿನೇಳು ಸಾಲುಗಳು ಉಳಿದುಬಂದಿವೆ. ಆ ಸಾಲುಗಳನ್ನು ಇಂಗ್ಲಿಷ್ ಗೀತೆಗಳ, ಕೊನೆಗೆ 'ಅಶ್ವತ್ಥಾಮನ್' ನ ಸುಂದರ ಹಳಗನ್ನಡದೊಂದಿಗೂ ಹೋಲಿಸಲು ಸಾಧ್ಯವಿಲ್ಲ. ಅಷ್ಟು ಪಳಮೆಗ, ತಮಿಳ ಸಮೀಪಕ್ಕೆ ಭಾಷೆ ಜಾರಿದೆ. 'ಹಾರೈಕೆ'ಯ ಕುರುಳು ಘಾಟಿನ ಒಂದೆರಡು ನಿದರ್ಶನವನ್ನು ಮಾತ್ರ ನೋಡಬಹುದು:

೧. ಕನ್ನಡ ನುಡಿಪಯಿರ್ ಮುನ್ನಡೆ ತೆನೆತುಂಬಿ
ಪೊನ್ನಡಕಿಲ್ಗಂ ಪೊನ್ನಕ್ಕೆ.
೨. ಬಿಡುಂ ಬಯಲ್ ಮಲೆ ಕುಡಿವಾಳ್ಕೆಕರ್ಬುಜೇನ್
ಪಾಡುಂ ಪಿಳಿಗ ಮೇಣ್ ಬಿಡಿ ನುಡಿಯುಂ.

'ಭರತಮಾತೆಯ ನುಡಿ' ಜನಪ್ರಿಯವಾದ ಹಾಡು. ಇದರ ಕೆಲವು ನುಡಿಗಳನ್ನು ಮಕ್ಕಳಾಗಿದ್ದಾಗ ಹಾಡಿಕೊಳ್ಳುತ್ತಿದ್ದ ನೆನಪು ಮಾಸದು.

ಭರತಮಾತೆಯೆ, ಭರತಮಾತೆಯೆ ಎಂದು ನೀ ತಲೆಯೆತ್ತುವೆ ?
ಎಂದು ಲೋಕದ ಜನದ ಹೃದಯದಿ ನಿನ್ನ ಮಹಿಮೆಯ ಬಿತ್ತುವೆ ?
ಎಂದು ಮಲಿನತೆ ನೀಗುವೆ–ಮುಗು
ಳೆಂದು ನಗುಮುಖವಾಗುವೆ ?

ದಾಸ್ಯಕ್ಕೀಡಾದ ಭಾರತದ ಪ್ರಾಚೀನ ಧರ್ಮಸಂಸ್ಕೃತಿಯ ಶ್ರೀಮಂತಿಕೆಯನ್ನು ನಿರೂಪಿಸುತ್ತಾ "ನಮ್ಮ ಮನೆಯಲಿ ನಾವು ಹೆರರಿಗೆ ದುಡಿವ ತೊತ್ತುಗಳಾದೆವು" ಎಂದು ಹೇಳುವ ಕವಿಯೇ ಬ್ರಿಟಿಷ್ ಸಾಮ್ರಾಜ್ಯದ ಬಗ್ಗೆ ರಾಜಿ ಮನೋಭಾವ, ಕೃತಜ್ಞತಾಭಾವ ವ್ಯಕ್ತಪಡಿಸುವುದನ್ನು ಕಾಣುತ್ತೇವೆ. ಭರತಮಾತೆಯೆ ಹೇಳುವ ಮಾತುಗಳಿವು:

ಕವಿಗೆ ನೆನೆವೆನು ನನ್ನ ನುಡಿತನ ಸೇರಿನಾಗುವ ತೆರವನು,
ಕಡಲ ರಾಗ ಬಿ ಹಿರಿಯಳ್, ನನ್ನಿಯ ತಂಗಿಯ ನೆರವನು ;
ಗೆಲಿದು ನಾಡನು ಪೊರೆದಳ್-ನಲ
ಮೊಲೆಯ ಕಟ್ಟನು ತೂಕಿದಳು.

ಅಲ್ಲದೆ ಮುಂದೆ–

ಅವಳ ಗುಣವನು ಮೆರೆಯಿರಿ–ಕಳೆ
ದವಳ ಕೊರತೆಯ ಮರೆಯಿರಿ.

. . . . .

ಧರ್ಮ ಶಾಂತಿ ಸ್ವತಂತ್ರ್ಯತೆ ನನ್ನಿಯ ತಂಗಿಯ ಮುಡಿಗಳು

ಈ ವೇಳೆಗಾಗಲೇ ಸ್ವಾತಂತ್ರ್ಯ ಸಮರದ ಕಿಡಿ ಹಾರಿತ್ತು. 1914 ರ ವೇಳೆಗೆ ತೀವ್ರ ಸ್ವರೂಪ ತಳೆಯದಿದ್ದರೂ ಸ್ಪಷ್ಟ ಭವಿಷ್ಯ ಮಾರ್ಗ, ಗುರಿ ಭಾರತೀಯ ಹೋರಾಟಗಾರರಿಗೆ ಕಾಣಿಸಿತ್ತು. 'ಶ್ರೀ' ಯವರಿಗೆ ಅದರ ಕಾವು ತಾಕಲಿಲ್ಲವೇ ? ಇಂಗ್ಲಿಷ್ ಗೀತೆಗಳಲ್ಲಿ ಸ್ವದೇಶ ಪ್ರೇಮದ ಕವನಗಳನ್ನು ಅನುವಾದಿಸಿದವರಿಗೆ ತಮ್ಮ ರಾಷ್ಟ್ರದ ದಾಸ್ಯ ವಿಮೋಚನೆಯ, ಹೋರಾಟದ ಅಭಿಮಾನ ಉಕ್ಕಲಿಲ್ಲವೆ, ಎಂಬ ಸಂಶಯ ಬರುತ್ತದೆ. ಅವರ ಮೇಲಿನ ಆರೋಪಣೆಗಳಲ್ಲಿ ಇದೂ ಸಹ ಒಂದು. ಪ್ರವಾಹಕ್ಕೆ ಎದುರಾಗಿ ಈಜಿದರೇಕೆ ಎಂಬುದು. ಇಲ್ಲಿ ಮಧ್ಯಮ ಮಾರ್ಗ ಹಿಡಿದು ಹೋರಾಟ ನಡೆಸಬೇಕೆನ್ನುವ 'ಶ್ರೀ' ಯವರ ಅಭಿಲಾಷೆ ವ್ಯಕ್ತವಾಗುತ್ತದೆ–

ಹಿರಿಯ ಸಿರಿಯೊಕ್ಕಲಲಿ ಹೊಕ್ಕಿರಿ, ನಂಟಳಿಯವೆ ಬಳಿಯಿರಿ ;
ಅರುಹಿ, ನಯದಲಿ ಹೋರಿ, ನಂಬಿಸಿ, ನುಸೆಯನಾಳಲು
ಕಲಿಯಿರಿ ;

ದೇಶದ ಸ್ವಾತಂತ್ರ್ಯ ಸಮರದ ಉತ್ಕಟ ಸಂದರ್ಭದಲ್ಲೂ 'ಶ್ರೀ' ಯವರು ಸಿಡಿದೇಳದಿದ್ದುದು ಒಂದು ಕೊರತೆ ಎಂದು ಹಲವರ ಅನಿಸಿಕೆ. ಭಾರತದ ಬಿಡುಗಡೆಯ ಬಗ್ಗೆ, ಭಾರತದ ಮುಂದಿನ ಸ್ವರೂಪದ ಬಗ್ಗೆ 'ಬಾನ್ ಕೊಂಡ ಕೃಷ್ಣನ್'ನಲ್ಲಿ ಬರುತ್ತದೆ. ಆದರೆ ಅದೂ "ಕೃಷ್ಣನಾಡಿದ ನುಡಿ"ಯಾಗಿ–

ಕರ್ನಾಟದೊರ್ನೋಟದಳವಿ
ಭಾರತದೊಳೊಕ್ಕೂಟ ದಾಳ್ಕೆ,
ಬಿಡುತೆಯೊಳಗೆಲ್ಲರಿಗೆ ಬಾಳ್ಕೆ,
ಬಡವರಲಿ ಸಿರಿ ಬರುವ ಸೊಂಪು
ಕುಡಿನರಿದು ಕಲೆ ತರುವ ತಂಪು

ಇತ್ಯಾದಿ. ಇಲ್ಲಿ ಭಾರತಕ್ಕೆ ಸ್ವಾತಂತ್ರ್ಯ ಬಂದ ಮೇಲೂ ರಾಜರ ಆಳ್ವಿಕೆ ಮುಂದುವರಿಯುವ ಆಶಯವಿದೆ. ದೇಶೀಯ ಸಂಸ್ಥಾನಗಳು ಫೆಡರಲ್ ಪದ್ಧತಿಯ ಭಾರತದಲ್ಲಿ ಸೇರಿ ಮುಂದುವರಿಯಬಹುದೆಂಬ ಅಭಿಪ್ರಾಯವಿದ್ದಂತೆ ತೋರುತ್ತದೆ. ಬಡವರೂ ಶ್ರೀಮಂತರಾಗುವ ಕನಸು ಸ್ವಾತಂತ್ರ ಪೂರ್ವದ ಎಲ್ಲರ ಮನಸ್ಸಿನ ಬಿಂಬವೇ ಆಗಿದೆ. ಆದರೆ ಶ್ರೀಯವರ ತೀವ್ರವಾದ ದೇಶ ಪ್ರೇಮವೂ ಸಾಮ್ರಾಜ್ಯಭಕ್ತಿ–ರಾಜಭಕ್ತಿಗಿಂತ ಬೇರೆಯಾಗಿ ನಿಲ್ಲುವುದಿಲ್ಲ. ಅಭಿನ್ನವಾಗಿ ಬಿಡುತ್ತದೆ. 'ಮೈಸೂರು ಮಕ್ಕಳು' ಕವಿತೆಯಲ್ಲಿ "ಕಡೆಗೆ ನಾಡೊಂದೆಂದು, ದೊರೆಯೊಬ್ಬ ನಮಗೆಂದು" ಬರುತ್ತದೆ, ಅದೂ "ಕನ್ನಡ ಕಣ್ಣಾದು ಮೈಸೂರು. ನಾಲ್ವಡಿ ಕೃಷ್ಣನ ಮೈಸೂರು" ಆಗಿ, ನಾಲ್ವಡಿ ಕೃಷ್ಣರಾಜ ಒಡೆಯರು 'ರಾಜರ್ಷಿ ಕರ್ಮಯೋಗಿ'. ರಜತ ಮಹೋತ್ಸವ ಪ್ರಗಾಥವಂತೂ ಅವರ ಕೀರ್ತಿ ಪತಾಕೆಯಾಗಿ ಮೆರೆಯುವಂತೆ ರಚಿತವಾಗಿದೆ. 'ಕನ್ನಡ ಬಾವುಟ' ಕವನದ ಕೊನೆಯಲ್ಲೂ "ಸಿರಿಯ ಜಯ ಚಾಮನೇ [ಮೊದಲು–ನಾಲ್ವಡಿ ಕೃಷ್ಣನೇ-ಎಂದಿತ್ತು] ಹಿರಿಯೊಲುಮೆ ಹೂವಾಗಿ" ಎಂದು ಬರುತ್ತದೆ. ಶೋಕ ಗೀತೆಯಾದ 'ಬಾನ್ ಕೊಂಡ ಕೃಷ್ಣನ್' ನಲ್ಲಿ ಸ್ತುತಿ ಸಹಜವಾದುದೆ. ಆದರೆ ಮೈಸೂರು ವಿಶ್ವವಿದ್ಯಾಲಯದ ಬೆಳ್ಳಿಯ ಹಬ್ಬದ ಸಂದರ್ಭಕ್ಕಾಗಿ ರಚಿಸಿದ, ಉಪನಿಷತ್ ವಾಕ್ಯಗಳ ಉದ್ಧರಣೆ, ಆದರ್ಶಗಳಿಂದ ಕೂಡಿದ, ಗಂಭೀರ ನಡೆಯ ಪ್ರಗಾಥ 'ಶುಕ್ರಗೀತೆ'ಯ ಕೊನೆಯಲ್ಲಿ ಸಹ–

ಜ್ಞಾನ ಧರ್ಮಂಗಳಿಂ ತಣ್ಣಿಸಿಳೆ ತಾಳ್ಗೆ ;
ಶ್ರೀ ಜಯನ್ ನಿಡುಬಾಳಿ ಸಮ್ಮನೊಲಿದಾಳ್ಗೆ ;

ಎಂದು ಬರುತ್ತದೆ. 'ಧರ್ಮಯುದ್ಧ' ಷಟ್ಪದಿ ಛಂದಸ್ಸಿನ ಕವನದಲ್ಲಿ, "ಧರ್ಮಕ್ಕೆ ಜಯ, ಅಧರ್ಮಕ್ಕಲ್ಲ, ಸ್ವಾತಂತ್ರ್ಯಕ್ಕೆ ಜಯ ದಾಸ್ಯಕ್ಕಲ್ಲ" ಎಂಬ ಭಾವನೆ ವ್ಯಕ್ತಪಡಿಸುವ, ಒಂದೇ ಉಸಿರಿನಲ್ಲಿ "ಗೆಲುವು ಶ್ರೀ ಜಯ ಚಾಮರಾಜಗೆ ! ಗೆಲುವು ಬಿಡುತೆಗೆ, ಸಾಧು ಜನತೆಗೆ" ಎಂಬ ಮಾತುಗಳೂ ಬರುವುದು ವಿಚಿತ್ರವಾಗಿ ತೋರುತ್ತದೆ. ಒಂದು ಕಡೆ ರಾಣಿ ಬ್ರಿಟಾನಿಯಾ, ಇನ್ನೊಂದು ಕಡೆ ರಾಜ ಮಹಾರಾಜರ ಸ್ತುತಿ ಪ್ರಿಯತೆ, ಈ ಅಡಕತ್ತರಿಗೆ ಸಿಕ್ಕಿಯೂ ಹತ್ತಿಕ್ಕಲಾಗದ ನಾಡು-ನುಡಿಯ ತೀವ್ರ ಒಲವಿಗೆ 'ಶ್ರೀ'ಯವರು ದನಿಕೊಟ್ಟಂತೆ ಕಾಣುತ್ತದೆ. ಈ ಕೆಲವು ಸಾಲುಗಳನ್ನು ಗಮನಿಸಬಹುದು–

ನಿನ್ನ ನಾಡಿನೊಳದೆಕೊ ಬೆಳಕು ಮೂಡಿಪುದು-ಜೀವಕೂಡಿಪುದು
ನಿನ್ನ ಮಕ್ಕಳು ನಿದ್ದೆಗಳೆದೆದ್ದು ಸಿಂಹದಂತೇಳುತ್ತ, ಹೊಳಗಿ,
ಕಣಕಿಳಿದು ಪಂಪ ನೃಪತುಂಗರಾ ಮಾತುಗಳ ದಿಟಗೆಯ್ಸುತಿಹರು.
ಸೆರೆಯನೊಕ್ಕದೆಗೊಗೆದು, ಬಿಡುಗಡೆಯ ಕೈಕೊಂಡು, ಹಳನೆನಪು ನೆನೆದು,
ಹೊಸಕಾಣ್ಕೆಗಳ ಕಂಡು, ಸಾಮ್ರಾಜ್ಯಗಳ ಮುತ್ತೆ ಕಟ್ಟುತಿಹರು
ನಿನ್ನ ನಾಡೊಂದಾಗಿ, ನಿನ್ನ ನುಡಿ ಮೇಲಾಗಿ, ಮನೆ ಮಕ್ಕಳೆಲ್ಲ
ಜೇನೊಕ್ಕಲಾಗಿ ಬಾಳುವರು !

(ಕನ್ನಡ ತಾಯ ನೋಟ)

ಸ್ವಾತಂತ್ರ್ಯೋತ್ತರ ಕಾಲದಲ್ಲಿ, ಅನೇಕ ಭ್ರಮನಿರಸನಗಳಾಗಿಯೂ, ಈ ಗಂಭೀರ ರಾಜಭಕ್ತಿ ಅತಿಯಾಯಿತು ಎನಿಸುತ್ತದೆ. ಆದರೆ, ಐವತ್ತರ ದಶಕದವರೆಗೂ ಈಚಿನವರೆಗೂ ಮೈಸೂರಿನ ರಾಜಪರಂಪರೆಯ ವೈಭವ, ದಸರಾದಿ ಉತ್ಸವಗಳು ಹಿಂದಿನಂತೇ ಮುಂದುವರಿಯಬೇಕೆನ್ನುವ, ನಡೆಯಬೇಕೆನ್ನುವ ಭಾವನೆ, ಮೈಸೂರಿನವರಲ್ಲಿ ಇದ್ದುದೂ ಗಮನಾರ್ಹ. ಮೈಸೂರು ರಾಜಸಂಸ್ಥಾನವಾಗಿದ್ದು, ಇದ್ದುದರಲ್ಲಿ ಅನುಕೂಲಗಳನ್ನು ಪಡೆದು ಪ್ರಗತಿಪರ ದೃಷ್ಟಿಯನ್ನು ತೋರುತ್ತಿತ್ತು. ಅನೇಕ ಪ್ರಥಮ ಕಾರ್ಯಗಳನ್ನು ಕೈಗೊಂಡ ಕಾರಣದಿಂದಲೂ ಮಾದರಿ ಸಂಸ್ಥಾನವೆಂಬ ಹೊಗಳಿಕೆಗೆ ಪಾತ್ರವಾಗಿತ್ತು. ಬ್ರಿಟಿಷರ ನೇರ ಆಡಳಿತಕ್ಕೆ ಒಳಪಟ್ಟ ಪ್ರಾಂತ್ಯಗಳನ್ನು ಸ್ವಾತಂತ್ರ್ಯದ ಹೋರಾಟ ತೀವ್ರ ಸ್ವರೂಪ ತಳೆದಂತೆ, ನೆಮ್ಮದಿಯ ಬದುಕಿನ ಆಸರೆಯಲ್ಲಿದ್ದ ಮೈಸೂರಿನಲ್ಲಿ ಆಗಲಿಲ್ಲ. ತುಳಿತ, ಶೋಷಣೆ ಹೆಚ್ಚಾದಷ್ಟೂ ಪ್ರತಿಭಟನೆ. ಘರ್ಷಣೆಗೆ ಅವಕಾಶ ಹೆಚ್ಚು. ಜೊತೆಗೆ ಪ್ರತಿಷ್ಠೆಯ ಮಹಾರಾಜಾ ಕಾಲೇಜಿನ ವಾತಾವರಣದ ಹಿನ್ನೆಲೆಯಲ್ಲೂ 'ಶ್ರೀ'ಯವರ ದೃಷ್ಟಿಯನ್ನು ಗಮನಿಸಬೇಕಾಗುತ್ತದೆ. ಎ. ಸೀ. ಅವರು ಈ ಬಗ್ಗೆ ಆ ದಿನಗಳನ್ನು ನೆನಪುಮಾಡಿಕೊಂಡು ಹೇಳುವ ಮಾತುಗಳನ್ನು ಗಮನಿಸಬಹುದು.

"'ಶ್ರೀ' ಯವರನ್ನು 'ಆಳೌ, ಬ್ರಿಟಾನಿಯಾ'. 'ಇಂಗ್ಲೆಂಡ್ ನಾವಿಕರು' ಇತ್ಯಾದಿ ಪದ್ಯಗಳಿಗೂ ಇನ್ನೂ ಕೆಲವು ಸಂಗತಿಗಳಿಗೂ ಸಂಬಂಧಿಸಿದಂತೆ ಭಾರತೀಯರಿಗೆ ಸಲ್ಲದ ಒಂದು ಅಭಿಮತ ಇತ್ತೆಂದು ಆಕ್ಷೇಪಿಸುತ್ತಾರೆ. ಬ್ರಿಟಿಷ್ ಇಂಡಿಯದಲ್ಲಿ ನೇರವಾಗಿ ಬ್ರಿಟಿಷರಿಗೆ ಜನ ಒಳ

ಪಟ್ಟಿದ್ದರೂ ನಾವು ಬ್ರಿಟಿಷರ ಅಧೀನದಲ್ಲಿದ್ದ ಒಂದು ದೇಶಿ ಸಂಸ್ಥಾನದಲ್ಲಿ ಇದ್ದವರು ! ಇಬ್ಬಗೆಯ ದಾಸ್ಯ. ತಕ್ಷಣಕ್ಕೆ ಮೇಲಿದ್ದವರು ಇಂಗ್ಲಿಷ್ ಅಧಿಕಾರಿಗಳು. ದೇಶ ಪ್ರೇಮವನ್ನು ತೋರಿಸತಕ್ಕ ಪದ್ಯಗಳು ಬಂದಾಗ ರೆಸಿಡೆಂಟ್ ಕಾಬ್ ಅಂಥವರ ಕಡೆಯಿಂದಲೂ, ಪ್ರೈವೇಟ್ ಸೆಕ್ರೆಟರಿ ಕ್ಯಾಂಬೆಲ್ ಮುಂತಾದವರ ಮೂಲಕವಾಗಿಯೂ ನಮ್ಮ ಸರ್ಕಾರಕ್ಕೆ ಎಚ್ಚರಿಕೆಯ ಲೇಖನಗಳು ಬರುತ್ತಿದ್ದು ದುಂಟು. ಇವರಿಗೆ ಇಂಗ್ಲಿಷ್ ಪ್ರೀತಿ ಎಷ್ಟೇ ಇರಲಿ, ಅವರು ತಮ್ಮ ದೇಶಪ್ರೇಮವನ್ನು ಹೇಗೆ ತೋರಿಸುತ್ತಾರೆ ಎಂಬುದರ ಮಾದರಿಗಾದರೂ ಇರಲಿ ಎಂಬಂತೆ ಕೆಲವನ್ನು ಅರಿಸಿದರು....——ನಮ್ಮ ಕಾಲದಲ್ಲಿ ಭಾರತದ ಪ್ರೀತಿ ಎಂಬುದು ಕೂಡ ಇಂಗ್ಲಿಷ್ ಮೂಲಕವಾಗಿಯೇ ಬಂದಿತು. ನಮ್ಮ ಪುರಾಣೇತಿಹಾಸ ಕಾವ್ಯಗಳು, ತತ್ತ್ವ ದರ್ಶ, ಚರಿತ್ರೆ-ಎಲ್ಲ ಅಲ್ಲಿಂದ ಬಂದುವೇ ; ಮ್ಯಾಕ್ಸ್ ಮುಲ್ಲರ್ ಅಂಥವರು ಭಾರತವನ್ನು ಎತ್ತಿನುಡಿದದ್ದರಿಂದ ಅಲ್ಲದೆಯೊ : 'ಶ್ರೀ'ಯವರಿಗೆ ಮನಸ್ಸಿನಲ್ಲಿ ಒಂದು ಭಾವ ಎಲ್ಲಕ್ಕಿಂತ ದೊಡ್ಡದಾಗಿತ್ತು ; ಚಾರಿತ್ರಿಕವಾದ ಯಾವುದೊ ಕಾರಣದಿಂದ ಇಂಗ್ಲಿಷರಿಗೂ ಇಂಡಿಯಕ್ಕೂ ಒಂದು ಸಂಬಂಧ ಉಂಟಾಗಿವೆ ; ಅಲ್ಲಿನ ಸಾಹಿತ್ಯ, ತತ್ವ, ಚರಿತ್ರೆ, ರಾಜಕೀಯಗಳಿಂದ ಇಲ್ಲಿನ ಮಾರ್ಗವನ್ನು, ತೌಲನಿಕ ದೃಷ್ಟಿಯನ್ನು ಬೆಳಸಿಕೊಳ್ಳಬೇಕು...,. ಸತ್ಯಾನ್ವೇಷಣೆಗೆ ತೊಡಗಿರುವವರಿಗೆ ಈ ಪೂರ್ವ ಪಶ್ಚಿಮ ಎರಡು ದೃಷ್ಟಿ ಗಳು ಅರ್ಥವಾಗಿ ಒಂದನ್ನೊಂದಕ್ಕೆ ಹೋಲಿಸಿ ತಾಳಿಕೆ, ಅಸಾಮಂಜಸ್ಯ ನೋಡಿ, ದೃಷ್ಟಿ ರೀತಿಗಳು ಬೆಳೆಯದಿದ್ದರೆ ನಮ್ಮ ದೃಷ್ಟಿ ಅರ್ಧವಾಗುತ್ತದೆ.... ಇಂಥ ಕಾರಣ ಗಳಿಂದಲೇ 'ಇಂಗ್ಲಿಷ್ ಗೀತಗಳ'ನ್ನು ಶ್ರೀಯವರು "To my students Who believe in the blending of the souls of India and England these verses affectionately are inscribed- ಅರ್ಪಿಸಿದ್ದೇನೆ ಅಂದದ್ದು."

ಇಂತಹ ವಾತಾವರಣದಲ್ಲಿ ಬ್ರಿಟಿಷರ ಬಗ್ಗೆ, ರಾಜರ ಬಗ್ಗೆ ಗೌರವಾಭಿಮಾನ, ಕಡೆಗೆ ಬಂದು ಬಗೆಯ ಭಕ್ತಿ ತೋರಿದ್ದು ಆಶ್ಚರ್ಯವೇನೂ ಆಗಲಾರದು.

'ಹೊಂಗನಸುಗಳು' ಸಂಗ್ರಹದ ವೈಶಿಷ್ಟ್ಯವನ್ನು ಈ ಮಾದರಿಗಳಲ್ಲಿ ಗಮನಿಸಬೇಕಾಗಿದೆ. Ode ಎಂಬುದು ಮೂಲತಃ ಗ್ರೀಸಿನಲ್ಲಿ ಹುಟ್ಟಿದ್ದು. ಅದರ ಮೂಲ ಸ್ವರೂಪವೇ ಬೇರೆ. ಮೇಳಗಾನ ಹಾಗೂ ನೃತ್ಯಮೇಳಕ್ಕಾಗಿ ರೂಪುಗೊಂಡದ್ದು. ಆದ್ದರಿಂದ ನುಡಿ-ಪಡಿನುಡಿಗಳ, ತಿರುವು- ಮುರುತಿರುವುಗಳ, ಲಯ-ತಾಳ ವೈವಿಧ್ಯದಿಂದ ಕೂಡಿದ್ದು ಸಂಕೀರ್ಣರೂಪವಾಗಿತ್ತು. ಛಂದಸ್ಸಿನ ಅನಿಯತತೆ ಹಿಂದಾರನಲ್ಲಿ ನಿಯತವಾಯಿತು. ಬದ್ಧವಾಗಿ ಭಾವಗೀತೆಯ ಲಕ್ಷಣ ಪಡೆದು ಕಾಲಕ್ರಮೇಣ ಬೆಳೆಯಿತು. ಇಂದು ವಿಮರ್ಶಕರಲ್ಲಿ ಆ ಬಗ್ಗೆ ಏಕಮತಾಭಿಪ್ರಾಯವಿಲ್ಲ. ಒಟ್ಟಿನಲ್ಲಿ ಗಂಭೀರನಡೆ, ಪ್ರೌಢವಸ್ತು, ಸಂಕೀರ್ಣಶಿಲ್ಪ ಉಳ್ಳದ್ದು. ಅದರಲ್ಲೂ ಎರಡು ಬಗೆ ಕಾಣಬಹುದು. ಒಂದು ನಿಯತ ಛಂದಸ್ಸಿನದು, ಇನ್ನೊಂದು ಅನಿಯತ ಛಂದಸ್ಸಿನದು. ಓಡ್ ಶಬ್ದಕ್ಕೆ ಅದೇ ಗಾಂಭೀರ್ಯವನ್ನು ಘನತೆಯನ್ನು ಮೂಡಿಸುವ 'ಪ್ರಗಾಥ' ಶಬ್ದವನ್ನು 'ಶ್ರೀ' ಯವರು ಬಳಸಿದರು. ಪ್ರಗಾಥ ಹೆಸರನ್ನು ಹಚ್ಚಿಕೊಳ್ಳ ದಿದ್ದರೂ ಡಿ. ವಿ. ಜಿ. ಯವರ 'ಬೇಲೂರಿನ ಶಿಲಾಬಾಲಿ- ಕೆಯರು' ಆ ವರ್ಗಕ್ಕೆ ಸೇರುತ್ತದೆ. ಬಹುಶಃ ಅದೇ ಮೊದಲನೆಯದು. 'ಶ್ರೀ'ಯವರು ಮಾದರಿಯಾಗಿ, ನಾಮ ಕರಣಮಾಡಿ ಮೂರು ಪ್ರಗಾಥಗಳನ್ನು ರಚಿಸಿದರು. ಅವು ಮೂರು 'ಹೊಂಗನಸುಗಳು' ಸಂಗ್ರಹದಲ್ಲಿವೆ. 'ಶ್ರೀ ಕೃಷ್ಣರಾಜ ರಜತ ಮಹೋತ್ಸವ'ದಲ್ಲಿ ಛಂದಸ್ಸಿನ ವೈವಿಧ್ಯವನ್ನು ಕಾಣಬಹುದು. ಲಯಗಳ ವಿನ್ಯಾಸ ಬದಲಾಗುತ್ತ ಹೋಗುತ್ತದೆ. ಕನ್ನಡ ನಾಡಿನ ಹಿರಿಮೆಯ ಜೊತೆಗೆ ರಾಜರ ಸ್ತುತಿಯೂ ಸೇರಿಬಿಡುತ್ತದೆ. 'ಕನ್ನಡ ತಾಯ ನೋಟ' ಇನ್ನೊಂದು ದೀರ್ಘ ಪ್ರಗಾಥ. ಲಯ ವೈವಿಧ್ಯಕ್ಕಿಂತ, ನಾಟಕೀಯ ಗುಣ, ವರ್ಣನೆ ಪ್ರಧಾನ ವಾಗುತ್ತದೆ. ಕನ್ನಡ ನಾಡನ್ನೆಲ್ಲ ಸುತ್ತಿದ ಕವಿ ಅದರ ಸೌಂದರ್ಯವನ್ನು ಉತ್ಸಾಹಪೂರ್ಣವಾಗಿ ವರ್ಣಿಸುತ್ತಾರೆ. ಕನ್ನಡಿಗರು ಕಪ್ಪು ಜನ ಎಂಬುದಕ್ಕೆ 'ಶ್ರೀ' ಅವರ ದೃಷ್ಟಿ, ತಕ್ಕವರ್ಣನೆ ಈಗಾಗಲೇ ಖ್ಯಾತವಾಗಿದೆ.

"ಕೆಳಗೆ ಬೆಳೆಹೊಲ ಕಪ್ಪು, ಮೇಲೆ ಬಾಂಬೊಲಕಪ್ಪು, ಬೆಟ್ಟಗಳು ಕಪ್ಪು,
ಕಾರ್ ನೋಡಗಳು ಕಪ್ಪು, ಹೊಳೆಯು ಕೆರೆಯುಮುಡುಕಪ್ಪು ತಾಯ್ ಕಾಲ್ ತೊಳೆವ
ಉಪ್ಪುಕಡಲದು ಕಪ್ಪು, ಜನಕಪ್ಪು-ಏನೆಂದೆ ? ತಪ್ಪು, ತಪ್ಪು !

ಹೀಗೆ ಸುತ್ತಾಡುತ್ತ ಬಂದ ಕವಿಗೆ ತುಂಗಭದ್ರೆಯ ತಡಿಯಲ್ಲಿ ಈ ದೃಶ್ಯ ಕಾಣ ಬರುತ್ತದೆ-

ಕುಳಿತಿಪ್ಪಳಾ ತಾಯಿ, ಕೈ ಮೇಲೆ ತಲೆಯೂರಿ, ಅಳಲಿನಾಳದಲಿ !
"ಯಾರಪ್ಪ, ನೀತಾಯಿ ? ಏತಕಿಂತೊಬ್ಬಳೇ ಕುಳಿತೆ ಕಾಡಿನಲಿ ?
ಏಕೆ ಮೊಗ ಬಾಡಿಹುದು, ಕಂದಿಹುದು, ನೊಂದಿಹುದು,
ಕಾಂತಿಗುಂದಿಹುದು ?"

ಎಂದು ಕೇಳಿದ್ದಕ್ಕೆ ಕನ್ನಡತಾಯಿ ತನ್ನ ಅಳಲನ್ನು, ಕನ್ನಡಮಕ್ಕಳ ಹೆಂಬೇಡಿತನವನ್ನು ತೋಡಿಕೊಳ್ಳುತ್ತಾಳೆ. 'ಶ್ರೀ' ಯವರ ಮಾತಿನಲ್ಲಿ ಸೊಗಸು ಅಡಗಿದೆ. ಇಂದು ಆಕೆಯ ಹಂಬಲ ಕೆಲವು ಬಗೆಯಲ್ಲಿ ನೆರವೇರಿರಬಹುದು. ಆದರೂ ಕನ್ನಡಿಗರ ಜಾಗೃತಿ ಪೂರ್ಣವಾಗಿಲ್ಲ. ಅಂದಿಗಿಂತ ಇಂದು ಪರಿಸ್ಥಿತಿ ಭಿನ್ನವಾಗಿಲ್ಲ ಎನ್ನುವುದನ್ನು ಮುಂದಿನ ಸಾಲುಗಳು ಸೂಚಿಸುತ್ತವೆ.

ಎಲ್ಲರೂ ಚೆಲುವಾದರೆಲ್ಲರೂ ಚಿನ್ನವಾದರು–ನೋಡು, ನೋಡು–
. . . .
ಅವರ ಮಕ್ಕಳು ಬೆಳೆದು ಕಳೆಗೂಡಿ ಮನೆಬೆಳಗಿ ಹಬ್ಬ ಮಾಡುವರು–
ತಾನ್ ಮೊದಲು ಬದುಕಿ,
ತಾಯ್ ಮೊದಲು ಬದುಕಿ,
ಹೆರರ ಹೊರೆಗಳನಿಳಿಸೆ, ಹೆರರ ಸೆರೆಗಳ ಬಿಡಿಸೆ, ಕಯ್ಯ ನೀಡುವರು.
ಆ ಸಯ್ಪು, ಆ ಪುಣ್ಯ, ನನಗಿಲ್ಲ : ನನ್ನ ಮಕ್ಕಳಿಗಿಲ್ಲ ಹಬ್ಬ–
. . . .
ನನ್ನನೊಲ್ಲರು ನನ್ನ ಮಕ್ಕಳೇ ! ತಾನ್ ಬಾಳಿ, ತಾಯ ಬಾಳಿಸರು.
ಹೆರರ ನುಡಿ, ಹೆರರ ನಡೆ–ಹೆರರ ಕೂಗೇ ಕೂಗು ; ಹೆರರವೇ ಹೆಮ್ಮೆ !
ನನ್ನ ಮನೆ ಹಾಳು.
ನನ್ನ ನುಡಿ ಬೀಳು.

ತಾಯನ್ನು ಸಮಾಧಾನ ಪಡಿಸಿ, ಕವಿ ಭವ್ಯ ಭವಿಷ್ಯವನ್ನು ಕಾಣುತ್ತಾರೆ. ಆದರೆ ಶ್ರೀಯವರ ಆ ಕಾಣ್ಕೆ ಇಂದಿಗೂ ಪೂರ್ಣವಾಗಿರುವುದು, ಕನ್ನಡ ತನ್ನ ರತ್ನ ಸಿಂಹಾಸನವನ್ನು ಏರದಿರುವುದು ಒಂದು ದುರಂತ.

ಮೂರನೆ ಪ್ರಗಾಥ 'ಶುಕ್ರಗೀತೆ' ಜ್ಞಾನದ, ಬೆಳಕಿನ ಪೂಜೆಯೇ ವಸ್ತು. ವಿಶ್ವವಿದ್ಯಾಲಯ ಒಂದು ಪಾತ್ರ. ವಿಷಯಕ್ಕೆ ತಕ್ಕ ಗಂಭೀರ ಶೈಲಿ:

ನೊತ್ತಮೊದಲ್, ಬೆಳಕಾಗಲೆಂದಾಗ, ಬೆಳಕಾಯ್ತು ; ಬೆಳಕು ಚೆಲುವಾಯ್ತು.
ಕಿಡಿ ಸಿಡಿದು ಮಿನುಗಿದವು ಜ್ಯೋತಿಗಳ್ : ಮೂಡಿದರು ಸೂರ‍್ಯ ಚಂದಿರರು
ಲೋಕ ಚಕ್ಷುಗಳೆನಿಸಿ, ಸತ್ಯಧರ್ಮಗಳಂತೆ, ಕ್ಷಮೆ ದಯೆಗಳಂತೆ.

ಕತ್ತಲು ಬೆಳಕಿನ ಹೋರಾಟ, ದೇವಾಸುರರ ಹೋರಾಟ ಎಂದು ಕೊನೆಯಾಗುತ್ತದೊ ಎಂದು ಕವಿ ಹೃದಯ ತುಡಿಯುತ್ತದೆ. ಆದರೆ ಸುಸಂಸ್ಕೃತನ ಮನಸ್ಸು ಬೆಳಕಿನ ಮಕ್ಕಳ ಸತ್ಯವನ್ನು ಕಾಣಬಲ್ಲುದು-

ಋತವೊಂದೆ ಗೆಲ್ಲುವುದು, ಅನೃತವಲ್ತು ;
ಅಮೃತಮನೆ ವಿದ್ಯೆಯೆ, ಅವಿದ್ಯೆಯಲ್ತು ;
ವಿಶ್ವಭಾರತಿ ಶರಣು, ಕಿರು ತೀರ್ಥವಲ್ತು.

ಸರ್ವ ಜೀವಂಗಳುಂ ಮುಕ್ತಿಯಂ ಕಾಣ್ಗೆ ;
ದೇವರೊಳ್ ಪಗೆನವರ ಕಾಳಗಂ ಮಾಣ್ಗೆ ;
ಸಾವದೆಲ್ಲಾ ಸತ್ತು, ಬಾನಾಳ್ಕೆ ಪ್ರಾಣ್ಗೆ.

'ಶ್ರೀ'ಯವರ ಅನುಭವದ ವಾಣಿಯಾಗಿ ಈ ಆರ್ಷೇಯ ವಾಣಿ ನಿಲ್ಲುತ್ತದೆ.

'ಚಾನ್ ಕೊಂಡ ಕೃಷ್ಣನ್' ಹೊಂಗನಸುಗಳಲ್ಲಿನ ಒಂದು ಶೋಕಗೀತೆ.

ಇದೂ ಸಹ 'ಶ್ರೀ'ಯವರು ಕನ್ನಡಕ್ಕೆ ಕೊಟ್ಟ ಭಾವಗೀತೆಯ ಒಂದು ಹೊಸರೂಪ. ಸಂಸ್ಕೃತದಲ್ಲಿ ಶೋಕಗೀತೆಗಳು ಹೊಸವೇನೂ ಅಲ್ಲ. ಚರಮಗೀತೆಗಳಿಗೆ ಸಂಬಂಧಿಸಿದ ದಂತಕಥೆಗಳೂ ಹುಟ್ಟಿವೆ. ಆದರೆ 'ಶ್ರೀ'ಯವರು ಇಂಗ್ಲೀಷಿನ 'ಎಲಿಜಿ' ರೂಪವನ್ನು ಇಲ್ಲಿ ಕನ್ನಡಕ್ಕೆ ಒಂದು ಮಾದರಿಯಾಗಿ ನೀಡಿದ್ದಾರೆ. Elegy ಅಥವಾ ಶೋಕಗೀತೆ ವೈಯಕ್ತಿಕವಾಗಿ ಸಾವಿನ ನೋವು ಕವಿಯ ಹೃದಯದಲ್ಲಿ ಹುಟ್ಟಿಸುವ ಭಾವದ ಅಲೆಗಳ ನೇರ ಅಭಿವ್ಯಕ್ತಿ ಎನ್ನಬಹುದು. ವ್ಯಕ್ತಿಗತವಾದ ನಷ್ಟದ ತೀವ್ರತೆ ಸಾಮಾನ್ಯ ಸ್ವರೂಪ ತಳೆದು ಆಧ್ಯಾತ್ಮಿಕ ಚಿಂತನೆಯಲ್ಲಿ. ಹುಟ್ಟು-ಸಾವುಗಳ ಆಲೋಚನೆಗೆ ಎಡೆಮಾಡಿಕೊಡುತ್ತದೆ. ಅಂಥ ಕಡೆ ಸಾವು ಒಂದು ನೆಪಮಾತ್ರವಾಗುತ್ತದೆ. ಬಹುವಾಗಿ ಶೋಕಗೀತೆಗಳು ಸತ್ತವರ ನೆನಪಿಗೆ ಸಲ್ಲಿಸುವ ಕಾಣಿಕೆಗಳು. 'ಶ್ರೀ'ಯವರು ನಾಲ್ಮಡಿ ಕೃಷ್ಣರಾಜ ಒಡೆಯರು ನಿಧನರಾದಾಗ, 1940 ರಲ್ಲಿ ಇದನ್ನು ರಚಿಸಿದರು. ಎಂಥ ಆಳಿಕೆ ಕೊನೆಯಾಯಿತು ಎಂಥ ವ್ಯಕ್ತಿ ಕಣ್ಮರೆಯಾದ ಎಂಬ ದನಿ ಉದ್ದಕ್ಕೂ

ಸ್ಥಾಯಿಯಾಗಿ ನಿಲ್ಲುತ್ತದೆ. ಅಲ್ಲಲ್ಲಿ ಬರುವ reflections ಎನ್ನಬಹುದಾದ ಸಾಲುಗಳು ಹೀಗಿವೆ.

''ಇನಿತಾಯ್ತೆ, ಹಿಡಿಮಣ್ಣು, ಹಿಡಿ ಬೂದಿ, ಆಳಬಾಳು ?
ಬಡವನೊ, ಬಲ್ಲಿದನೊ, ದೊರೆಯೊ, ಹುಳುವೋ,
ಇನಿತೆ ಈ ಬಾಳು ?
. . . .
ಮಂಗಳವೆ ಗೆಲ್ಲು !
ಹೂವಾದ ಬಾಳುದಿರೆ, ಹಣ್ಣಾಗಿಬಹುದು–ಮತ್ತೆ ಹೂವಹುದು.
ಬೂದಿ ಬೂದಿಗೆ ಕೂಡೆ, ಮಣ್ಣು ಮಣ್ಣಾಗೆ,
ಮೃತನಮೃತವಾಗುವನು
ದಿವ್ಯಕಳೆಯಿನ್ ಕೂಡಿದಾತ್ಮವಾಗುವನು.

ಈ ಸಾಲುಗಳು earth to earth, ash to ashes ಎಂಬುದನ್ನು ನೆನಪಿಗೆ ತರುವಂತೆಯೇ ಈ ಸಂದರ್ಭದಲ್ಲಿ The King is dead ; Long live the king ಎಂಬುದನ್ನು ಸುಳಿಯಿಸುತ್ತವೆ. ನಡುನಡುವೆ ಬರುವ ಕೆಲವು ಉಪಮೆಗಳು ಕವಿಸಮಯ. ಕ್ಲೀಷೆಗಳಿಂದ ಕೂಡಿ ಹೊಸತನದ ಮೆರುಗನ್ನು ಕಳೆದುಕೊಳ್ಳುತ್ತವೆ :

ನಡುಹಗಲ ನೇಸರನು ಕಪ್ಪುರಾಹುಹಿಡಿದಂತೆ,
ನೆರೆಯ ಬೆಳ್ದಿಂಗಳನು ಹಾವು ಗಿಡಿದಂತೆ,
ತಿಳಿಯಾದ ಬಾನಿಂದ ಬರಸಿಡಿಲ್ ಸಿಡಿದಂತೆ,
ಬೆನ್ನಿರಿವ ಕಳ್ಳಕೊಲೆ ಸುರಗಿಯಂತೆ
ಎತ್ತಣಿಂದೆರಗಿತೋ ಮೃತ್ಯು !
ಓ ಹಾಳು ಮೃತ್ಯು.

'ಕನ್ನಡದ ಬಾವುಟ' ಈಗಾಗಲೇ ಪ್ರಸಿದ್ಧವಾದ ಗೀತೆ. ಹಾಡು ಜನಪ್ರಿಯವಾದರೂ ಹಾಡನ್ನು ಅಚ್ಚಿಸುವಲ್ಲಿ 'ಶ್ರೀ'ಯವರು ನಡೆಸಿದ ಕನ್ನಡ ಲಿಪಿಯ ಸುಧಾರಣೆಯ ಪ್ರಯೋಗ ವಿಫಲವಾಯಿತು. ರೂಢಿಯನ್ನು ಬುಡ ಸಮೇತ ಕೀಳುವುದು ಅಷ್ಟು ಸುಲಭವಲ್ಲ.

'ಶ್ರೀ'ಯವರ ಸ್ವತಂತ್ರ ಕವಿತೆಗಳು ಹದಿನೈದು, ಈ ಈ ಸಂಗ್ರಹದಲ್ಲಿ ಹದಿನಾಲ್ಕು ಮಾತ್ರ ಇವೆ. ಇಷ್ಟು ಅಲ್ಪ ಸಂಖ್ಯೆಯ ಕವನಗಳಿಂದಲೆ ಎದ್ದ ವಾದ–ವಿವಾದಗಳು, ಸಂಶಯ–ಅನುಮಾನಗಳು ಮಾತ್ರ ಹೆಚ್ಚು ಎನಿಸುತ್ತದೆ. ಒತ್ತು ನೀಡಬೇಕಾದ ಕಡೆ ಬಿಟ್ಟು, ಗೌಣವಾದುದನ್ನೇ ಪ್ರಧಾನ ಸಮಸ್ಯೆಯಾಗಿಸುವುದೂ ಸಲ್ಲ ಎಂಬುದು ಮುಖ್ಯ. ನಿರೀಕ್ಷೆ ಬೇರೆ, ವಾಸ್ತವ ಸ್ಥಿತಿ ಬೇರೆ. ಎರಡನ್ನೂ ಬೆರಸಬಾರದು ಎಂಬುದಕ್ಕೆ 'ಹೊಂಗನಸುಗಳು' ಸಾಕ್ಷಿ.

---

"'ಅಶ್ವತ್ಥಾಮನ್' ನಾಟಕವು 'ಗದಾಯುದ್ಧ ನಾಟಕ'ದ ಉತ್ತರಾರ್ಧದಂತಿದೆ. 'ಗದಾಯುದ್ಧ' ನಾಟಕದ ಅಂತ್ಯದಲ್ಲಿಯೇ ಅಶ್ವತ್ಥಾಮನ ಪ್ರವೇಶವಾಗುತ್ತದೆ. ತೊಡೆಯುಡಿದು ಬಿದ್ದಿದ್ದ ಕೌರವನಲ್ಲಿಗೆ ಬಿರುಗಾಳಿಯಂತೆ ನುಗ್ಗಿ ಬಂದು, ಲಕ್ಷ್ಮಿಯನ್ನು ಜರ್ಬಿಸಿ, ಕೌರವನ ಪ್ರತೀಕಾರವನ್ನು ಪೂರ್ಣಗೊಳಿಸಲು ಹೋಗಿ ಅವಸರದಲ್ಲಿ ಪ್ರಮಾದವೆಸಗಿ ಬಾಲಹತ್ಯೆಯ ದೋಷವನ್ನು ತಲೆಯ ಮೇಲೆ ಹೊತ್ತು ತಪಸ್ಸಿಗೆ ತೆರಳುವ ಅಶ್ವತ್ಥಾಮನ ಪಾತ್ರದಲ್ಲಿರುವ ದುರಂತದ ಎಳೆಯನ್ನು ಶ್ರೀಯವರು ಕೂಡಲೆ ಗುರುತಿಸಿದರು. ಏಜಾಕ್ಸ್‌ನೊಂದಿಗೆ ಆತನಿಗಿರುವ ಸಾಮ್ಯವನ್ನೂ ಕಂಡುಕೊಂಡರು. ಇಬ್ಬರೂ ದುಡುಕು ಸ್ವಭಾವದವರು, ಮಹಾವೀರರು, ಅಪ್ರತಿಹತವಾದ ಆತ್ಮಪ್ರತ್ಯಯವುಳ್ಳವರು, ವಿಧಿಯ ಸಂಚಿಗೆ ಬಲಿಯಾದವರು. ವ್ಯಕ್ತಿ ಪ್ರಧಾನವಾದ ಈ ನಾಟಕದಲ್ಲಿ ಶ್ರೀಯವರು ಅಶ್ವತ್ಥಾಮನ ಪಾತ್ರವನ್ನು ಉಜ್ವಲವಾಗಿ ಬೆಳಗಿಸಿದ್ದಾರೆ''

**ಡಾ|| ಕೆ. ಮರುಳಸಿದ್ದಪ್ಪ**
ಆದುನಿಕ ಕನ್ನಡ ನಾಟಕ

# ಕನ್ನಡ ಛಂದಸ್ಸಿನ ಅಧ್ಯಯನಕ್ಕೆ ಬಿ. ಎಂ. ಶ್ರೀಯವರ ಕೊಡುಗೆ

**ಡಾ. ಕೆ ಜಿ ನಾರಾಯಣ ಪ್ರಸಾದ್**

ಕನ್ನಡ ಛಂದಸ್ಸಿನ ಅಧ್ಯಯನಕ್ಕೆ ಬಿ. ಎಂ. ಶ್ರೀಯವರು ತಮ್ಮ ಬರಹಗಳ ಮೂಲಕ ಕೊಟ್ಟ ಕೊಡುಗೆಯೇನು ಎಂಬುದರ ಬಗ್ಗೆ ವಿಚಾರ ಮಾಡುವುದು ಪ್ರಕೃತದ ಉದ್ದೇಶ. ಈ ಸಂಬಂಧದಲ್ಲಿ ಮೊದಲು. ಆ ಕ್ಷೇತ್ರವು ಅವರ ಕಾಲದಲ್ಲಿ ಹೇಗಿತ್ತು ಎಂಬುದರ ಬಗ್ಗೆ ನೋಡಬೇಕಾದುದು ಅನಿವಾರ್ಯ.

ಅಂದು ಆ ಕ್ಷೇತ್ರದಲ್ಲಿ ಸಾಂಪ್ರದಾಯಿಕ ಅಧ್ಯಯನ ಪದ್ಧತಿಯೇ ಇನ್ನೂ ನೆಲೆಯೂರಿತ್ತು. ಗುರು ಲಘು ಪ್ರಾಸ ಯತಿ–ಇವುಗಳ ವ್ಯಾಖ್ಯಾನ, ಬಂಧಗಳ ಲಕ್ಷಣವಿವರಣೆ, ಷಟ್ಪ್ರತ್ಯಯಗಳ ವಿಚಾರಗಳ ನಿರೂಪಣೆ–ಇಷ್ಟಕ್ಕೇ ಅದು ಸೀಮಿತವಾಗಿತ್ತು. ಕನ್ನಡ ಛಂದಸ್ಸಿಗೆ ಒಂದು ಚರಿತ್ರೆಯಿದೆಯೆಂಬುದು ಅಂದಿನ ವರಿಗೆ ಇನ್ನೂ ಅಷ್ಟಾಗಿ ಗಮನಕ್ಕೆ ಬಂದಿರಲಿಲ್ಲ. ಹೀಗಾಗಿ ಯಾವ ಬಂಧ ಯಾವಾಗ ಬಳಕೆಗೆ ಬಂದಿರಬಹುದು, ಅದರ ಮೂಲ ಯಾವುದಿರಬಹುದು, ಛಂದಸ್ಸಿನ ಆವಿರ್ಭಾವ ಹೇಗಾಗುತ್ತದೆ, ಕವಿಗೆ ಛಂದಸ್ಸಿನ ಪರಿಜ್ಞಾನ ಅಗತ್ಯವೇ ಎಂದು ಮುಂತಾದ ವಿನೂತನ ಹಾಗೂ ಮೂಲಭೂತ ಅಂಶಗಳ ಬಗ್ಗೆ ವಿಚಾರಮಾಡುವ ಪ್ರವೃತ್ತಿ ಬೆಳೆದಿರಲಿಲ್ಲ. ಅದು. ತೌಲನಿಕ ದ್ರಾವಿಡಭಾಷಾ

ವಿಜ್ಞಾನದ ಶಾಖೆ ವಿಸ್ತರಿಸುತ್ತಿದ್ದ ಕಾಲವಾಗಿದ್ದರೂ ತೌಲನಿಕ ಛಂದಸ್ಸನ್ನು ಕುರಿತಂತೆ ಮಾತ್ರ ಬಹಳ ವಿರಳವಾಗಿ ಅಲ್ಲೊಂದು ಇಲ್ಲೊಂದು ಇಂಗ್ಲಿಷ್ ಲೇಖನಗಳು ಪ್ರಕಟವಾಗುತ್ತಿದ್ದವು. ದ್ರಾವಿಡ ಭಾಷೆಗಳ ಛಂದಸ್ಸುಗಳನ್ನು ತೌಲನಿಕವಾಗಿ ಅಧ್ಯಯನ ಮಾಡಬಹುದು, ಮಾಡಬೇಕು –ಎಂಬ ವಿಚಾರವನ್ನು ಕುರಿತಂತೆ ಕನ್ನಡದಲ್ಲಂತೂ ಲೇಖನಗಳು ಬಂದಿರಲಿಲ್ಲ. ಸಾಂಪ್ರದಾಯಿಕ ಪದ್ಧತಿಯಿಂದ ಅತ್ತ ಇತ್ತ ತಿರುಗುವ ಗುಣ ಅಂದಿನ ಛಂದಸ್ಸಿನ ಅಭ್ಯಾಸಿಗಳಿಗೆ ಇರಲಿಲ್ಲ.

ಇಂತಹ ಸೀಮಿತಕ್ಷೇತ್ರದ ನಡುವೆ ನಿಂತು ವಿಶಾಲ ಕ್ಷೇತ್ರದತ್ತ ಕೈಮಾಡಿ ತೋರಿ, ಆ ದಿಶೆಯಲ್ಲಿ ತಾವೂ ನಡೆದು, ಇತರರೂ ನಡೆಯಲು ದಾರಿಮಾಡಿಕೊಟ್ಟುದು ಶ್ರೀಯವರ ಹಿರಿಮೆ. ಅವರ ಬರಹಗಳ ಪೈಕಿ, ಛಂದಸ್ಸಿಗೇ ಸಂಬಂಧಿಸಿದುದು 'ಕನ್ನಡ ಕೈಪಿಡಿ'ಯ ಪ್ರಥಮ ಸಂಪುಟದಲ್ಲಿ ಸೇರಿರುವ ಅವರ 'ಕನ್ನಡ ಛಂದಸ್ಸಿನ ಚರಿತ್ರೆ' ಎಂಬ ಲೇಖನ ಮಾತ್ರ. **A Hand book of Rhetoric** ನಲ್ಲಿ ಆಂಶಿಕವಾಗಿ ಇಂಗ್ಲಿಷ್ ಛಂದಸ್ಸಿನ ವಿಚಾರಗಳು ಬಂದಿವೆ. ಉಳಿದಂತೆ, 'ಕನ್ನಡ ಮಾತು ತಲೆಯೆತ್ತುವ ಬಗೆ' ಎಂಬ ಲೇಖನ ಮತ್ತು 'ಗರತಿಯಹಾಡು' ಹಾಗೂ 'ನಾಡಪದಗಳು'–ಇವುಗಳಿಗೆ ಬರೆದ ಮುನ್ನುಡಿಗಳು ಇವುಗಳಲ್ಲಿ, ಛಂದಸ್ಸನ್ನು ಕುರಿತು, ಪ್ರಾಸಂಗಿಕವಾಗಿ ಮಾತ್ರ ಒಂದೋ ಎರಡೋ ಮಾತುಗಳನ್ನಾಡಿದ್ದಾರೆ.

ಕವಿತೆಯಲ್ಲಿ ಛಂದಸ್ಸಿನ ಸ್ಥಾನವೇನು, ಛಂದಸ್ಸು ಹೇಗೆ ಆವಿರ್ಭವಿಸುತ್ತದೆ, ಎಲ್ಲ ಕವಿಗಳೂ ಛಂದಸ್ಸನ್ನು ಕಲಿತಿರುತ್ತಾರೆಯೇ–ಎಂಬ ವಿಚಾರಗಳನ್ನು ಕುರಿತು ಶ್ರೀಯವರು ನೇರವಾಗಿ ಎಲ್ಲೂ ವಿಚಾರಮಾಡಲು ಹೋಗಿಲ್ಲ. ಆದರೆ, 'ಗರತಿಯಹಾಡು' ಕೃತಿಯ ಮುನ್ನುಡಿಯಲ್ಲಿ ಜನಪದ ಸಾಹಿತ್ಯವನ್ನು ಕುರಿತು ಆಡಿರುವ ಮಾತುಗಳಲ್ಲಿ ಪ್ರಾಸಂಗಿಕವಾಗಿ ಮಾತ್ರ ಈ ಅಂಶಗಳಿಲ್ಲಿ ವ್ಯಕ್ತವಾಗಿವೆ.

ಛಂದಸ್ಸು ಇದ್ದ ಮಾತ್ರಕ್ಕೇ ಬರೆದದ್ದೆಲ್ಲ ಪದ್ಯವಾಗುವುದಿಲ್ಲ. ಸಿಕ್ಕಿದ ವಿಚಾರವನ್ನೆಲ್ಲ ಕಂದವಾಗಿಯೋ ವೃತ್ತವಾಗಿಯೋ ಮತ್ತೊಂದಾಗಿಯೋ ಪದ್ಯರೂಪದಲ್ಲಿ ಇಟ್ಟ ಮಾತ್ರಕ್ಕೇ ಅದು ನಿಜವಾದ ಕವನವೆನ್ನಿಸುವುದಿಲ್ಲ. ಭಾವದ ಬೆಸುಗೆಯಿಲ್ಲದ ಛಂದಸ್ಸಿನಿಂದ ಏನೂ ಪ್ರಯೋಜನವಿಲ್ಲ. ಇದನ್ನು ಕುರಿತಂತೆ, "ಬರಿಯ ವೃತ್ತಗಳ ಹೆಣಿಗೆಯೊಂದೇ ಸಾಲದು. ಹಳ್ಳಿಯವರು ಆಡುವ ಗಾದೆ ಸಾಮತಿಗಳನ್ನು ಹಳಗನ್ನಡದಲ್ಲಿ ಕಂದಗಳು ಮಾಡಿ ನೇಯುವುದಕ್ಕಿಂತ ಗಂಭೀರವಲ್ಲದೇ ಮಾಗಿಯ ಕೋಗಿಲೆಯಂತೆ ಬಾಯಿ ಹೊಲಿದುಕೊಂಡಿರುವುದು"[1] ಎಂಬುದಾಗಿ 'ಕನ್ನಡಮಾತು ತಲೆಯೆತ್ತುವ ಬಗ್ಗೆ' ಎಂಬುದರಲ್ಲಿ ಶ್ರೀಯವರು ಸ್ವಲ್ಪ ಖಾರವಾಗಿಯೇ ನುಡಿದಿದ್ದಾರೆ. ಜನಪದಗೀತೆಗಳನ್ನು ಕುರಿತಂತೆ, "ಇವುಗಳ ಛಂದಸ್ಸು ಬಹು ಸಹಜ, ಸರಳ; ಭಾಷೆಯೂ ಸಹಜ, ಸರಳ; ಆಡುವ ಮಾತು, ಹಾಡುವ ಮಟ್ಟು. ಆದರೂ ಜನಗಳ ಹೃದಯದಿಂದ ಸಂತೋಷದ ಅಥವಾ ದುಃಖದ ಸಮಯದಲ್ಲಿ ನೇರವಾಗಿ ಉಕ್ಕಿಬಂದ ಕಾರಣದಿಂದ ಇವುಗಳಲ್ಲಿ ಒಂದು ಸೊಗಸೂ. ಒಂದು ಕಾಂತಿಯೂ ಒಂದು ರಮಣೀಯತೆಯೂ ಮೆರೆಯುವುವು. ಮಕ್ಕಳ ತೊದಲು, ಇನಿಯಳ ಅಲ್ಲೆ. ತಂಗಾಳಿಯ ತೀಟ, ಮಲ್ಲಿಗೆಯ ಕಂಪು, ಬೆಳದಿಂಗಳ ತಂಪು ಮುಂತಾದ ಉಪಮಾನಗಳು ಕೃತಕ ಕವಿತ್ವಕ್ಕಿಂತಲೂ ಈ ಹಾಡುಗಳಿಗೆ ಹೆಚ್ಚಾಗಿ ಒಪ್ಪುತ್ತವೆ"[2] –ಎಂದು 'ಗರತಿಯಹಾಡು' ಕೃತಿಗೆ ಬರೆದ ಮುನ್ನುಡಿಯಲ್ಲಿ ಹೇಳಿರುವಲ್ಲಿ ಅವರು ಭಾವಬಂಧಗಳ ಈ ಬೆಸುಗೆಯ ಮಹತ್ವವನ್ನು ಸ್ಪಷ್ಟಪಡಿಸಿದ್ದಾರೆ. ಅದ್ದರಿಂದ, ಈ ಬೆಸುಗೆಯಿರಬೇಕಾದರೆ ಕವನವು ಸಹಜವಾಗಿ ಮೂಡಬೇಕು; ಆಗ ಛಂದಸ್ಸು ಅದರಲ್ಲಿ ತಾನೇ ತಾನಾಗಿ ಕೂಡಿಬರುತ್ತದೆ; ಅಷ್ಟಲ್ಲದೆ ಛಂದಸ್ಸೇ ಪ್ರಧಾನವಲ್ಲ. ಮೊದಲು ಕವನದ ರಚನೆ; ಅನಂತರ ಅದರಲ್ಲಿರುವ ಛಂದಸ್ಸಿನ ವಿಶ್ಲೇಷಣೆ. ಜನಪದಗೀತೆಗಳಲ್ಲಿ ಇದನ್ನು ಕಾಣಬಹುದು. ಕುಣಿತದ ಹೆಜ್ಜೆಗಳೇ ತಾಳ; ತಾಳಕ್ಕೆ ಅನುಗುಣವಾಗಿ ಇವುಗಳ ಆವಿರ್ಭಾವ. ಇದನ್ನೇ ಶ್ರೀಯವರು, "ನೃತ್ಯದ ಉಲ್ಲಾಸವನ್ನು ಪ್ರಕಾಶಗೊಳಿಸುತ್ತಾ, ಉದ್ಯೋಗದ ಆಯಾಸವನ್ನು ಪರಿಹಾರಮಾಡುತ್ತಾ, ಆಗ್ಗೆ ಏಳುವ ಉಸಿರಿಗೆ ತಕ್ಕ ಹಾಗೆ ರಾಗವನ್ನು (ಛಂದಸ್ಸನ್ನು) ಹೊಂದಿಸುತ್ತಾ, ಜನರ ಸರ್ವಸಾಧಾರಣವಾದ ಮನೋಭಾವವನ್ನು ವಿಶದಗೊಳಿಸುತ್ತಾ ಹುಟ್ಟಿದುವು ಈ ಹಾಡುಗಳು; ಮತ್ತು ಈ ಹಾಡಿನ "ಮರಿ"ಗಳು"[3] –ಎಂಬುದಾಗಿ ಹೇಳುವುದರ ಮೂಲಕ ಸ್ಪಷ್ಟಪಡಿಸಿದ್ದಾರೆ. "ಶಾಸ್ತ್ರಗಳ ಪರಿಚಯವೇ ಇಲ್ಲದ ಜನಸಾಮಾನ್ಯರೆಲ್ಲರೂ ಹಾಡಿನ ಮಟ್ಟನ್ನು ಎಂದರೆ ಅಷ್ಟು ಮಟ್ಟಿಗೆ ಛಂದಸ್ಸನ್ನು ಬಲ್ಲರು. ಹಿಂದಿನ ಹಾಡನ್ನು ತಲೆಮೊರೆಯಾಗಿ ಕಲಿತು ಹೇಳುವುದಲ್ಲದೆ ಹೊಸಹಾಡನ್ನು ಕಟ್ಟಬಲ್ಲರು"[4] –ಎಂಬುದಾಗಿ ಹೇಳುವುದರ ಮೂಲಕ, ಕಾವ್ಯವನ್ನು ರಚಿಸುವವರಿಗೆ

ಛಂದಸ್ಸಿನ ಪರಿಜ್ಞಾನವಿರಲೇಬೇಕು ಎಂಬ ನಿಯಮವೇನೂ ಇಲ್ಲ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.

'ಕನ್ನಡ ಛಂದಸ್ಸಿನ ಚರಿತ್ರೆ'ಯಲ್ಲಿ ಕನ್ನಡ ಛಂದಸ್ಸಿನ ಸಮಗ್ರ ಇತಿಹಾಸವನ್ನು ಸಂಕ್ಷಿಪ್ತವಾಗಿ ಮೊದಲ ಬಾರಿಗೆ ನಿರೂಪಿಸುವ ಉತ್ಕೃಷ್ಟಪ್ರಯತ್ನವನ್ನು ಕಾಣುತ್ತೇವೆ. ಆ ಲೇಖನದಲ್ಲಿ, ಶ್ರೀಯವರು, ಎರಡು ಭಾಗಗಳನ್ನು ಮಾಡಿಕೊಂಡಿದ್ದಾರೆ. ಮೊದಲ ವಿಭಾಗವು ಸಂಸ್ಕೃತ ಛಂದಸ್ಸನ್ನು ಕುರಿತಿದೆ. ಅದರಲ್ಲಿ ಮೊದಲು ವೈದಿಕಛಂದಸ್ಸಿನ ಪ್ರಮುಖ ಬಂಧಗಳ ಲಕ್ಷಣಗಳನ್ನು ಸೋದಾಹರಣವಾಗಿ ತೋರಿಸಿಕೊಡಲಾಗಿದೆ. ಮುಂದಿನ ಸಂಸ್ಕೃತ ಕವಿಗಳೇ ಈ ವೈದಿಕ ಛಂದಸ್ಸನ್ನು ಬಳಸಲಿಲ್ಲ–ಕನ್ನಡ ಕವಿಗಳಂತೂ ಆ ಕಡೆ ಕಣ್ಣೆತ್ತಿಯೂ ನೋಡಲಿಲ್ಲ. ಹೀಗಿರುವಾಗ ಶ್ರೀಯವರು ಅದರ ಬಗ್ಗೆ ಏಕೆ ಹೇಳಿದರು ಎಂಬ ಸಂಶಯ ಸಹಜವಾಗಿಯೇ ಮೂಡುತ್ತದೆ. ಆದರೆ, "ವೈದಿಕ ಛಂದಸ್ಸುಗಳನ್ನು ಕನ್ನಡ ಕವಿಗಳು ಉಪಯೋಗಿಸಿಲ್ಲವಾದರೂ, ಲೌಕಿಕ ಛಂದಸ್ಸುಗಳಿಗೆ ಅವು ಮೂಲವಾಗಿರುವುದರಿಂದಲೂ, ಅವುಗಳಲ್ಲಿ ಗಣನಾರ್ಹವಾದ ತೇಜಸ್ಸೂ ಗಾಂಭೀರ್ಯವೂ ಸೌಂದರ್ಯವೂ ಕಾಣಬರುವುದರಿಂದಲೂ, ಅವುಗಳಲ್ಲಿ ಮುಖ್ಯವಾದ ವೃತ್ತಗಳನ್ನು ಕನ್ನಡ ಕವಿಗಳು ಮುಂದಾದರೂ ಗಮನಿಸಬೇಕು"[5] –ಎಂಬ ಶ್ರೀಯವರ ಮಾತುಗಳಲ್ಲೇ ಇದಕ್ಕೆ ಸಮಾಧಾನ ಸಿಕ್ಕುತ್ತದೆ. ಹೊಸಬರು ಈ ಬಂಧಗಳನ್ನು ನೋಡಬೇಕು, ಇವುಗಳ ಸೊಗಸನ್ನು ತಿಳಿಯಬೇಕು. ಇದರಿಂದ ಸ್ಫೂರ್ತಿಪಡೆದು ಹೊಸಮಾರ್ಗ ಹಿಡಿಯಬೇಕು; ಇವುಗಳ ಸಹಾಯ ಪಡೆಯಬೇಕು ಎಂಬುದು ಇದರ ಉದ್ದೇಶ.

ಶ್ರೀಯವರು, ಈ ಸಂಬಂಧದಲ್ಲೇ, ವೈದಿಕ ಅನುಷ್ಟುಪ್ಪಿನಿಂದ ಶ್ಲೋಕವು ಜನಿಸಿರುವ ವಿಚಾರವನ್ನು ತಿಳಿಸಿ, ಪ್ರಾಚೀನ ಕನ್ನಡ ಕವಿಗಳು ಈ ಶ್ಲೋಕವನ್ನು ಮಾತ್ರ ಕ್ವಚಿತ್ತಾಗಿಯಾದರೂ ಬಳಸಿರುವ ಅಂಶವನ್ನು ಕೂಡ ಗುರುತಿಸಿ ಹೇಳಿದ್ದಾರೆ.

ಅಲ್ಲಿಂದ ಮುಂದಕ್ಕೆ ಲೌಕಿಕಛಂದಸ್ಸಿನ ವಿಚಾರ ಬಂದಿದೆ. ಅದರಲ್ಲಿ ಹಲವು ಹೊಸ ಅಂಶಗಳಿವೆ. ಅವನ್ನು ಹೀಗೆ ಸಂಗ್ರಹಿಸಬಹುದು : ೧. ವೈದಿಕ ಛಂದಸ್ಸಿನಲ್ಲಿದ್ದ ನಾಲ್ಕು ಅಕ್ಷರಗಳ ಗಣಗಳ ಅಳತೆಗೆ ಬದಲಾಗಿ ಲೌಕಿಕಛಂದಸ್ಸಿನಲ್ಲಿ ಮೂರು ಅಕ್ಷರಗಳ ಗಣಗಳ ಅಳತೆ ಬಳಕೆಗೆ ಬಂತೆಂಬುದು. ೨. ಛಂದೋಗ್ರಂಥಗಳಲ್ಲಿ ೧೫೦ ಕ್ಕೂ ಹೆಚ್ಚು ವೃತ್ತಗಳನ್ನು ನಿರೂಪಿಸಿದ್ದರೂ ಉತ್ಪಲಮಾಲೆ, ಚಂಪಕಮಾಲೆ, ಶಾರ್ದೂಲವಿಕ್ರೀಡಿತ, ಮತ್ತೇಭವಿಕ್ರೀಡಿತ ಸ್ರಗ್ಧರೆ, ಮಹಾಸ್ರಗ್ಧರೆ ಈ ಆರು ಮಾತ್ರ ವಿಶೇಷವಾಗಿಯೂ, ಬಹಳ ವಿರಳವಾಗಿ ಮಲ್ಲಿಕಾಮಾಲೆ, ಮಂದಾಕ್ರಾಂತ, ಮಾಲಿನಿ, ತರಳ, ಪೃಥ್ವಿ, ಹರಿಣಿ ಮುಂತಾದವು ಮಾತ್ರವೂ ಬಳಕೆಯಾಗುತ್ತಿವೆಯೆಂಬುದು. ೩. ಉತ್ಪಲ, ಶಾರ್ದೂಲ ಮತ್ತು ಸ್ರಗ್ಧರೆಗಳಲ್ಲಿ ಆದಿಯ ಗುರುವಿಗೆ ಬದಲು ಎರಡು ಲಘುಗಳನ್ನಿಡುವುದರ ಮೂಲಕ ಕನ್ನಡ ಕವಿಗಳು ಚಂಪಕ, ಮತ್ತೇಭ, ಮಹಾಸ್ರಗ್ಧರೆಗಳನ್ನು ರೂಪಿಸಿದಂತೆ ಕಾಣುತ್ತದೆ ಎಂಬ ಹೊಸವಿಚಾರವನ್ನು ಹೇಳಿರುವುದು. ೪. ಪ್ರಾಸಸೇರಿತು: ಯತಿ ಮೀರಿತು: ಪಾದಗಳ ಕೊನೆಯಲ್ಲಿ ನಿಲ್ವು ಸಾಧಾರಣವಾಗಿ ಇಲ್ಲ: ಅಲ್ಲಿ ದೀರ್ಘವಾಗಬಹುದಾದ ಹ್ರಸ್ವ ಬರಲು ಎಡೆಯಿಲ್ಲ ಮುಂದಕ್ಕೋಡುವುದರಿಂದ. ಎಲ್ಲಕ್ಕಿಂತ ಹೆಚ್ಚಾಗಿ ವೃತ್ತದ ಧಾಟಿ ಘೋಷಗಳನ್ನು ಪಾಲಿಸುವುದಕ್ಕಾಗಿ ಹೆಚ್ಚು ಹೆಚ್ಚಾಗಿ ಸಂಸ್ಕೃತದ ದೀರ್ಘಸಮಾಸಗಳನ್ನು ಹೆಣೆಯುವಂತಾಯಿತು: ಕನ್ನಡನುಡಿಗಳು ತಮ್ಮ ಸ್ವರಗಳೊಡನೆ ಎದ್ದು ನಿಂತು ಕಾಣದಂತಾಯಿತು"[6] –ಎಂದು ಹೇಳಿರುವುದು. ೫. ವೃತ್ತಗಳ ರಚನೆಯಲ್ಲಿ ದೇಶಿಯು ವಿರಳವಾಗಿ ಮಿಂಚುವುದನ್ನೂ ಸಂಸ್ಕೃತವು ಪ್ರಬಲವಾಗಿರುವುದನ್ನೂ ಉದಾಹರಣೆಗಳ ಸಹಿತವಾಗಿ ನಿ ರೂ ಪಿ ಸಿ ರು ವು ದು. ೬. ಮಲ್ಲಿಕಾಮಾಲೆ, ತರಳ, ಕೌಂಚ, ಶಂಭುನಟನ ವೃತ್ತಗಳಲ್ಲಿ ಮಾತ್ರಾಲಯದ ಛಾಯೆಯನ್ನು ಗುರುತಿಸಿರುವುದು. ೭. ಮೂರಕ್ಷರದ ಗಣಗಳಿಂದ ಪಾದಗಳನ್ನು ವಿವರಿಸುವುದರಿಂದ ವೃತ್ತಗಳ ನಿಜಸ್ವರೂಪ, ರಚನೆಯ ರಹಸ್ಯಗಳು ತಿಳಿಯುವುದಿಲ್ಲವೆಂದು ಹೇಳಿರುವುದು.

ಅಲ್ಲಿಂದ ಮುಂದಕ್ಕೆ ಕಂದದ ವಿಚಾರ ಬಂದಿದೆ. ಆರ್ಯೆ–ಕಂದಗಳಿರುವ ಸಂಬಂಧವನ್ನು ಅಲ್ಲಿ ನಿರೂಪಿಸಲಾಗಿದೆ. ಹೊಸಗನ್ನಡದಲ್ಲಿ (ಎಂದರೆ ನಡುಗನ್ನಡದಲ್ಲಿ) ಕಂದದ ರಚನೆ ಅಷ್ಟು ಸು ಲ ಭ ವ ಲ್ಲ ವೆಂ ಬ ವಿಚಾರವನ್ನು ತಿಳಿಸಿ. ಅದರಿಂದಾಗಿ ಕಂದದ ರಚನೆಯಲ್ಲಿ ಕವಿಗಳು ಅಲ್ಲಲ್ಲಿ ನಿಯಮೋಲ್ಲಂಘನೆ ಮಾಡಿದ್ದಾರೆಂದು ಹೇಳಲಾಗಿದೆ. ಮಾರ್ಗ, ದೇಸಿ ಮತ್ತು ಅವೆರಡರ ಮಿಶ್ರಣ ಈ ಮೂರೂ ಶೈಲಿಗಳ ಕಂದಗಳಿಗೆ ಉದಾಹರಣೆಗಳನ್ನು ಕೊಡಲಾಗಿದೆ.

ಈ ವಿಭಾಗದ ಕೊನೆಯಲ್ಲಿ. ಭಾಷಾವ್ಯತ್ಯಾಸದಿಂದ ವೃತ್ತ ಕಂದಗಳ ಮೇಲಾದ ಪರಿಣಾಮದ ಬಗ್ಗೆ ಹೇಳಿದ್ದಾರೆ. ಹೊಸಭಾಷೆಗೆ ವೃತ್ತಕಂದಗಳು ಹೊಂದುವುದಿಲ್ಲ:

ಸಂಸ್ಕೃತದ ನಡೆಯನ್ನು ಹೋಲುವ ಹಳಗನ್ನಡದ ನಡೆ ಮಾತ್ರ ಅವಕ್ಕೆ ಸರಿಹೋಗುತ್ತದೆ; ಆದ್ದರಿಂದ ಭಾಷೆಯು ಪರಿವರ್ತನೆ ಹೊಂದಿದಂತೆ ಅವು ದೇಶ್ಯ ಬಂಧಗಳಿಗೆ ಜಾಗ ತೆರವುಮಾಡಿಕೊಟ್ಟು ತಾವು ಹಿಂದೆ ನಿಂತವು—ಎಂಬ ಅಂಶವನ್ನು ಅಲ್ಲಿ ನಿರೂಪಿಸಿದ್ದಾರೆ.

'ಕನ್ನಡ ಛಂದಸ್ಸಿನ ಚರಿತ್ರೆ'ಯ ಎರಡನೆಯ ಭಾಗವು ಮೊದಲನೆಯದಕ್ಕಿಂತ ದೀರ್ಘವಾಗಿದೆ. ಅದರಲ್ಲಿ ವಿಶೇಷವಾಗಿ ಕನ್ನಡ ಛಂದಸ್ಸನ್ನು ಕುರಿತು ಹೇಳಲಾಗಿದೆ. ಮೊದಲಿಗೆ, ನಾಗವರ್ಮನ ಛಂದೋಂಬುಧಿಯ ವಸ್ತುವಿನ್ಯಾಸದ ಬಗ್ಗೆ ಹೇಳಿ, ಅದರಲ್ಲಿ ಕನ್ನಡ ಛಂದಸ್ಸಿಗೆ ಹೆಚ್ಚಿನ ಸ್ಥಾನ ಸಿಕ್ಕಿಲ್ಲವೆಂಬುದನ್ನು ತಿಳಿಸಿದ್ದಾರೆ. ಅಂತೆಯೇ, ಹಿಂದಿನ ಕಾವ್ಯಗಳಲ್ಲಿ ಕೂಡ ಕನ್ನಡ ಬಂಧಗಳು ಅಷ್ಟಾಗಿ ಬಳಕೆಯಾಗಲಿಲ್ಲ; ಆದರೆ ಜನಪದಸಾಹಿತ್ಯದಲ್ಲಿ ಮಾತ್ರ ಅವುಗಳ ಬಳಕೆ ವಿಶೇಷವಾಗಿತ್ತು; ಆ ಜನಪದಗೀತೆಗಳ ಛಂದಸ್ಸೇ ನಿಜವಾದ ಕನ್ನಡ ಭಾಷೆಯ ಛಂದಸ್ಸು, ಕನ್ನಡ ಜನರ ಛಂದಸ್ಸು-ಎಂಬ ಅಂಶಗಳನ್ನು ನಿರೂಪಿಸಿ, "ತೆಲುಗು ತಮಿಳುಗಳೊಡನೆ ಹೋಲಿಸಿನೋಡಿದರೆ ಇದೇ ಮುಂದೆ ವೀರಶೈವಕವಿಗಳು ಮುಂದಕ್ಕೆ ತಂದ ಛಂದಸ್ಸುಗಳ ತಾಯಿ ಎಂದೂ ಚರಿತ್ರೆಯ ದೃಷ್ಟಿಯಿಂದ ನೋಡತಕ್ಕವರಿಗೆ ಸ್ಪಷ್ಟವಾಗದಿರಲಾರದು"[7] – ಎಂದಿದ್ದಾರೆ. ಮುಂದೆ, "ಮಲೆಯಾಳದಲ್ಲಿಯೂ ಕೊಡಗು, ತುಳು ಮುಂತಾದ, ಸಾಹಿತ್ಯಕ್ಕೇರದ, ಭಾಷೆಗಳ ಹಾಡುಗಳಲ್ಲಿಯೂ ಲಾವಣಿಗಳಲ್ಲಿಯೂ ಈ ಛಂದಸ್ಸಿನ ತಳಹದಿಯನ್ನೂ ರೂಪಾಂತರಗಳನ್ನೂ ಗುರುತಿಸಬಹುದು"[8] –ಎಂದೂ ಹೇಳಿದ್ದಾರೆ. ಇಲ್ಲಿ ಶ್ರೀಯವರು ಹೇಳಿರುವ ನಾಲ್ಕು ಪ್ರಧಾನ ಅಂಶಗಳು ಇವು : ೧. ಛಂದಸ್ಸನ್ನು ಚಾರಿತ್ರಿಕ ದೃಷ್ಟಿಯಿಂದ ಅಧ್ಯಯನ ಮಾಡಬೇಕು ಎಂಬುದು, ೨. ಜನಪದ ಗೀತೆಗಳ ಛಂದಸ್ಸನ್ನು ಅಧ್ಯಯನಮಾಡಬೇಕು ಎಂಬುದು, ('ನಾಡ ಪದಗಳು' ಕೃತಿಗೆ ಬರೆದ ಮುನ್ನುಡಿಯಲ್ಲೂ ಈ ಅಂಶವನ್ನು ಎತ್ತಿಹಿಡಿದಿದ್ದಾರೆ). ೩. ದ್ರಾವಿಡ ಭಾಷೆಗಳ ಛಂದಸ್ಸುಗಳನ್ನು ತೌಲನಿಕವಾಗಿ ಅಭ್ಯಾಸ ಮಾಡಬೇಕು ಎಂಬುದು ; ೪. ದ್ರಾವಿಡ ಭಾಷೆಗಳ ಜನಪದ ಗೀತೆಗಳ ಛಂದಸ್ಸನ್ನು ತೌಲನಿಕವಾಗಿ ಅಭ್ಯಾಸ ಮಾಡಬೇಕು ಎಂಬುದು. ತೌಲನಿಕ ಅಧ್ಯಯನದಲ್ಲಿ ಕೂಡ ತಮಿಳಿನ ಸಹಾಯವನ್ನು ಹೆಚ್ಚಾಗಿ ತೆಗೆದುಕೊಳ್ಳಬೇಕೆಂಬುದು ಅವರ ವಾದ. ಏಕೆಂದರೆ, ದ್ರಾವಿಡತನ ಹೆಚ್ಚಾಗಿ ಉಳಿದಿರುವುದು ತಮಿಳಿನಲ್ಲಿಯೇ ಹೊರತು ತೆಲುಗು ಮಲೆಯಾಳಗಳಲ್ಲಲ್ಲ; ಅವು ಸಂಸ್ಕೃತದಿಂದ ಹೆಚ್ಚು ಪ್ರಭಾವಿತವಾಗಿವೆ—ಎಂಬುದರಿಂದಾಗಿ. ಒಟ್ಟಾರೆ, ಶ್ರೀಯವರು ಇಲ್ಲಿ ಕನ್ನಡ ಛಂದಸ್ಸಿನ ಅಧ್ಯಯನದ ಹೊಸಮಾರ್ಗವನ್ನು ತೆರೆದು ತೋರಿಸಿದರೆಂಬ ಅಂಶವನ್ನು ಮಾತ್ರ ಪ್ರಧಾನವಾಗಿ ಗಮನಿಸಬೇಕು.

ಅಲ್ಲಿಂದ ಮುಂದೆ, ಆರಂಭಕಾಲದಿಂದ ೨೦ನೆಯ ಶತಮಾನದವರೆಗಿನ ಕನ್ನಡ ಛಂದಸ್ಸಿನ ಸಮಗ್ರ ಇತಿಹಾಸದ ಬಹುಸಂಕ್ಷಿಪ್ತ ನಿರೂಪಣೆಯಿದೆ. ೧೨ನೆಯ ಶತಮಾನದ ನಂತರ ಕನ್ನಡ ಬಂಧಗಳು ಪ್ರಚಾರಕ್ಕೆ ಬಂದು ಬಹುಮುಖವಾಗಿ ವ್ಯಾಪಿಸಿದ್ದು, ೧೯ನೆಯ ಶತಮಾನದ ನಂತರ ಹಳೆಯದರ ತಳಹದಿಯ ಮೇಲೆ ಹೊಸಬಂಧಗಳು ರೂಪಿತವಾಗುತ್ತಿರುವುದು—ಈ ಅಂಶಗಳನ್ನು ಅಲ್ಲಿ ತಿಳಿಸಿದ್ದಾರೆ,

ಮುಂದೆ ದ್ರಾವಿಡಗಣಗಳ ಲಕ್ಷಣಗಳ ಹಿನ್ನೆಲೆಯಲ್ಲಿ ಕನ್ನಡಗಣಗಳ ಲಕ್ಷಣ ವಿಶ್ಲೇಷಣೆಯಿದೆ. ಕನ್ನಡ ಛಂದಸ್ಸಿನ ತೌಲನಿಕ ಅಧ್ಯಯನವು ಮೊದಲ ಹೆಜ್ಜೆಗಳನ್ನಿಡುತ್ತಿರುವುದನ್ನು ಇಲ್ಲಿ ಕಾಣುತ್ತೇವೆ. ಈ ಸಂಬಂಧದಲ್ಲಿ ಗಮನಿಸಬೇಕಾದ ಕೆಲವು ಪ್ರಮುಖ ವಿಚಾರಗಳಿವೆ : ೧. ತ್ರಿಮೂರ್ತಿ ಗಣಗಳ ಘಟಕಗಳಿಗೆ ತಮಿಳಿನ 'ಅಶೈ' ಎಂಬುದರ ಆಧಾರದ ಮೇಲೆ ಮೊದಲ ಬಾರಿಗೆ ಶ್ರೀಯವರು ಅಂಶವೆಂಬ ಹೆಸರಿಟ್ಟರೆಂಬುದು. ೨. ರುದ್ರವು ಪಾದಾಂತ್ಯದಲ್ಲಿ ವಿಷ್ಣು+ಗುರುವಾಗಿಯೂ ಉಳಿದೆಡೆ ಬ್ರಹ್ಮ+ವಿಷ್ಣುವಾಗಿಯೂ ಒಡೆಯಿತು ಎಂದು ಹೇಳಿರುವುದು. (ವಿಷ್ಣು+ಗುರುವಾಗಿ ಒಡೆಯುವುದೇನೋ ಸರಿ, ಆದರೆ ಬ್ರಹ್ಮ+ವಿಷ್ಣುವಾಗಿ ಒಡೆಯಿತೆನ್ನುವುದು ಅಷ್ಟು ಸರಿಯಾಗಿ ಕಾಣುವುದಿಲ್ಲ ; ಬ್ರಹ್ಮ+ಬ್ರಹ್ಮವಾಗಿ ಒಡೆಯುವುದೆಂದು ಹೇಳುವುದು ಉಚಿತ]. ೩. ಅಂಶಗಣಗಳು ಮಾತ್ರಾಗಣಗಳಾಗಿ ಪರಿವರ್ತನೆ ಹೊಂದಿದವು ಎಂದು ಹೇಳಿರುವುದು. ೪. ಮಾತ್ರಾಗಣಗಳಿಗೆ ರಗಳೆಗಳ ಹೆಸರಿನ ಆಧಾರದ ಮೇಲೆ ಉತ್ಸಾಹಗಣ, ಮಂದಾನಿಲಗಣ, ಲಲಿತಗಣ ಎಂದು ಹೆಸರಿಟ್ಟಿರುವುದು—ಇವು. ಅಂಶಗಣವು ಮಾತ್ರಾಗಣವಾದ ಸಂಬಂಧದಲ್ಲಿ ಶ್ರೀಯವರು ಈ ರೀತಿ ವಿವರಣೆ ಕೊಟ್ಟಿದ್ದಾರೆ : "ಮೂಲಾಂಶದ ಮೇಲೇರಿದ ಅಂಶಗಳಿಗೆ ಬದಲಾಗಿ ಎರಡು ಲಘುಗಳ ಪ್ರಯೋಗ ಇಲ್ಲ. ಅಂಶಗಣಗಳು ಸ್ವಚ್ಛವಾಗಿ ಹಾಗೇ ಇರುವವರೆಗೂ ಈ ನಿಯಮವಿತ್ತು. ಆದರೆ ಕ್ರಮೇಣ, ಮೊದಲನೆಯ ಸ್ಥಾನದಂತೆ, ಮಿಕ್ಕಸ್ಥಾನಗಳಲ್ಲಿಯೂ ಈ

ಬದಲಾವಣೆ ಹಬ್ಬಿಕೊಂಡು ಅಂಶಗಣವಾಗಿದ್ದದ್ದು ಮಾತ್ರಾಗಣವಾಗಿ ಪರಿಣಮಿಸಿತು. ಆಗ ಬ್ರಹ್ಮ, ವಿಷ್ಣು ರುದ್ರ ಎಂಬ ಅಥವಾ ಎರಡು, ಮೂರು, ನಾಲ್ಕು ಅಂಶಗಳ ಗಣಗಳು ಹೋಗಿ ೩.೪.೫ ಮಾತ್ರೆಗಳುಳ್ಳ ಮೂರು ಗಣಗಳು ಉಳಿದವು"[9]–ಎಂಬುದಾಗಿ. ಇಲ್ಲಿಂದ ಮುಂದಕ್ಕೆ ಅವರು ಅಂಶಬಂಧಗಳಿಗೆ ಪ್ರಸ್ತಾರ ಹಾಕುವಲ್ಲಿ ಕೂಡ ಹಲವೆಡೆ ಇದೇ ಲಕ್ಷಣ ಕಂಡು ಬರುತ್ತದೆ. ಹಲವೆಡೆ, ಎರಡು, ಮೂರು, ನಾಲ್ಕನೆಯ ಅಂಶಗಳ ಸ್ಥಾನಗಳಲ್ಲಿ ಕೂಡ, ಒಂದು ಗುರುವಿನ ಮೌಲ್ಯಕ್ಕೆ ಸಮವೆಂಬ ಕಾರಣದಿಂದ, ಎರಡು ಲಘುಗಳನ್ನಿರಿಸಿದ್ದಾರೆ. ಕೆಲವೆಡೆ ಅದು ಮೂರು ಮಾತ್ರೆಗಳ ಮೌಲ್ಯಕ್ಕೂ ಏರಿದೆ. ಅಂತಹ ಕಡೆಗಳಲ್ಲಿ ಅದನ್ನು ದ್ವಿಮಾತ್ರಾ ಮೌಲ್ಯಕ್ಕೆ ಕುಗ್ಗಿಸಿ ಹೊಂದಿಸಬೇಕೆಂದು ಕೂಡ ಸೂಚಿಸಿದ್ದಾರೆ. ಆದರೆ ಈ ನಿಯಮ ಅಷ್ಟಾಗಿ ಸರಿಯೆಂದು ಕಾಣುವುದಿಲ್ಲ. ಎರಡು, ಮೂರು, ನಾಲ್ಕನೆಯ ಅಂಶದ ಸ್ಥಾನದಲ್ಲಿ, ಗುರುವಿಗೆ ಬದಲು ಎರಡು ಲಘುಗಳು ಬಂದದ್ದರಿಂದ ಅಂಶಗಣವು ಮಾತ್ರಾಗಣವಾಯಿತು ಎನ್ನುವುದಕ್ಕಿಂತ, ಮಾತ್ರೆಗಳ ಕಾಲಮೌಲ್ಯವು ನಿಯತವಾಗಿ ತೋರಿಬಂದಾಗ ಅಂಶದ ನಡೆಯು ಸಹಜವಾಗಿಯೇ ಮಾತ್ರೆಯ ನಡೆಗೆ ಹೊರಳಿತು; ಅನಂತರ ಮಾತ್ರಾಮೌಲ್ಯಕ್ಕನುಗುಣವಾಗಿ ಗುರುಲಘುಗಳ ಪರ್ಯಾಯವು ಎಲ್ಲ ಸ್ಥಾನಗಳಲ್ಲೂ ಬಳಕೆಗೆ ಬಂತು–ಎಂದು ಹೇಳುವುದು ಹೆಚ್ಚು ಸಮಂಜಸವಾಗಿ ತೋರುತ್ತದೆ.

ಇಲ್ಲಿಂದ ಮುಂದಕ್ಕೆ ಕನ್ನಡ ಬಂಧಗಳನ್ನು ಕುರಿತ ವಿವರಣೆಯಿದೆ. ಇದರಲ್ಲಿ ಗಮನಿಸಬೇಕಾದ ವಿಚಾರಗಳೆಂದರೆ ಏಳೆ, ಗೀತಿಕೆಗಳಂತಹ ಸಮಸ್ಯಾತ್ಮಕ ಬಂಧಗಳಿಗೆ ಕೂಡ ಲಭ್ಯಮಾಹಿತಿಯಷ್ಟರಿಂದಲೇ ಲಕ್ಷಣಗಳನ್ನು ಊಹಿಸಲು ಹೋಗಿರುವುದು ಮತ್ತು ತ್ರಿಪದಿ, ರಗಳೆಗಳಂತಹ ಬಂಧಗಳ ಮೂಲವನ್ನು ಗುರುತಿಸಲು ಪ್ರಯತ್ನಿಸಿರುವುದು. ತ್ರಿಪದಿಯು ಮೊದಲು ಎರಡು ಪಾದಗಳ ಬಂಧವಾಗಿದ್ದು ಅನಂತರ ಮೂರು ಪಾದಗಳ ಬಂಧವಾಗಿ ಪರಿವರ್ತನೆ ಹೊಂದಿರಬೇಕೆಂದು ಹೇಳಿದ್ದಾರೆ. ಈ ಎರಡು ಸಾಲಿನ ಬಂಧವು ಏಳೆಯೇ ಹೊರತು ಬೇರೆಯಲ್ಲ–ಎಂಬುದು ಅವರ ಗಮನಕ್ಕೆ ಬಂದಿಲ್ಲ. ಏಳೆಯ ಲಕ್ಷಣ ಅವರಿಗೆ ಸ್ಪಷ್ಟವಾಗಿಲ್ಲದೆ ಇದ್ದುದೇ ಇದಕ್ಕೆ ಕಾರಣ. ಏಳೆಯನ್ನು ವಿವರಿಸಿ, ಅದರ ಮೂಲವನ್ನು ಯಾಲಪದದಲ್ಲಿ ಗುರುತಿಸಲು ಹೋಗಿದ್ದಾರೆ. ಆದರೆ ಅದು ಸಮಂಜಸವಾಗಿಲ್ಲ. ಅಂತೆಯೇ ಗೀತಿಕೆಯಲ್ಲಿ ಸಾಂಗತ್ಯದ ಮೂಲವನ್ನು ಊಹಿಸಿದ್ದಾರೆ. ಆದರೆ ಗೀತಿಕೆಯ ಲಕ್ಷಣವೇ ಇನ್ನೂ ಸ್ಪಷ್ಟವಾಗಿಲ್ಲ. ರಗಳೆಯು ಪ್ರಾಕೃತದಿಂದ ಬಂದದ್ದೋ ಕನ್ನಡದಿಂದ ಬಂದದ್ದೋ ಎಂಬುದರ ಬಗೆಗಂತೂ ಅವರಿಗೆ ಪ್ರಬಲವಾದ ಸಂಶಯವಿದೆ. ಅದರಲ್ಲಿ ಜಗಣ ಮತ್ತು ನೆಲಗಳು ಬರುವುದು ಅವರ ಸಂಶಯಕ್ಕೆ ಕಾರಣವಾಗಿದೆ. ಅದ್ದರಿಂದ ರಗಳೆಗೆ ಕೂಡ ಅವರು ಅಂಶವಿನ್ಯಾಸವನ್ನು ಆರೋಪಿಸಲು ಹೋಗಿದ್ದಾರೆ. ಇವೆಲ್ಲ ಹೇಗೇ ಇದ್ದರೂ, ಬಂಧಗಳ ಇತಿಹಾಸವನ್ನು ಗುರುತಿಸಬೇಕು ಎಂಬ ಹೊಸ ವಿಚಾರಧೋರಣೆಯನ್ನು ಶ್ರೀಯವರು ಇಲ್ಲಿ ವ್ಯಕ್ತಪಡಿಸಿದ್ದಾರೆಂಬುದನ್ನು ಮಾತ್ರ ಕಡೆಗಣಿಸುವಂತಿಲ್ಲ. ಮರೆಯುವಂತಿಲ್ಲ.

ಈ ವಿಭಾಗದಲ್ಲೇ ಗಮನಿಸಬೇಕಾದ ಇತರ ಅಂಶಗಳೆಂದರೆ ಕೆಲವು ಬಂಧಗಳ ನಡೆಯ ಸೊಬಗನ್ನು ಉದಾಹರಣೆಗಳ ಮೂಲಕ ತೋರಿಸಿರುವುದು ಮತ್ತು ಅವುಗಳ ನಡೆಯಲ್ಲಿ ಕೆಲವು ವೇಳೆ ಕಂಡು ಬರುವ ತೊಡಕುಗಳಿಗೆ ಕಾರಣಗಳನ್ನು ಸೂಚಿಸುವುದು–ಇವು.

ಇಲ್ಲಿಂದ ಮುಂದಕ್ಕೆ ಯಕ್ಷಗಾನ ಮುಂತಾದವುಗಳಲ್ಲಿ ಪ್ರಯೋಗವಾಗಿರುವ, ಆದರೆ ಹಿಂದಿನ ಛಂದಶ್ಶಾಸ್ತ್ರಜ್ಞರು ಹೇಳದೆ ಇರುವ ಕೆಲವು ವಿಶಿಷ್ಟ ಬಂಧಗಳನ್ನು ಲಕ್ಷಣಸಹಿತ ನಿರೂಪಿಸಿದ್ದಾರೆ. ಅವನ್ನು ತಿಳಿಯುವುದರಿಂದ ಹೊಸ ಛಂದಸ್ಸಿನ ಅಧ್ಯಯನಕ್ಕೆ ಅಂತೆಯೇ ಹಳೆಯ ಛಂದಸ್ಸಿನ ಅಧ್ಯಯನಕ್ಕೆ ಅಂತೆಯೇ ಹಳೆಯ ಛಂದಸ್ಸಿನ ಇತಿಹಾಸದ ನಿರ್ಧಾರಕ್ಕೆ ಸಹಾಯವಾಗುತ್ತದೆಯೆಂಬ ವಿಚಾರವನ್ನು ತಿಳಿಸಿದ್ದಾರೆ. ಅದೇ ರೀತಿ ಹೊಸಛಂದಸ್ಸಿನ ರಚನೆಗಳೆಲ್ಲ ಸಂಪೂರ್ಣವಾಗಿ ಹೊರಗಿನಿಂದ ಬಂದವಲ್ಲ, ಅವುಗಳ ಮೂಲ ಇಲ್ಲೇ ಇದೆ–ಎಂಬ ಅಂಶವನ್ನು ಕೂಡ ಎತ್ತಿಹಿಡಿದಿದ್ದಾರೆ.

ಈ ಲೇಖನದ ಕೊನೆಯ ಭಾಗದಲ್ಲಿ ತಮಿಳು ಛಂದಸ್ಸಿನ ಕೆಲವು ಪ್ರಮುಖ ಬಂಧಗಳ ಲಕ್ಷಣಗಳನ್ನು ಉದಾಹರಣೆಗಳ ಸಹಿತ ನಿರೂಪಿಸಿದ್ದಾರೆ. "ಪುರಾತನ ತಮಿಳು ಛಂದಸ್ಸಿನಲ್ಲಿ ಕನ್ನಡ ಛಂದಸ್ಸಿನ ಹಿಂದಿನ ಹೆಜ್ಜೆ ಕಾಣಬರುವುದು.[10] ಅದ್ದರಿಂದ ಅವುಗಳ ಬಗ್ಗೆ ಅರಿಯಬೇಕಾದುದು ಅಗತ್ಯ–ಎಂಬ ದೃಷ್ಟಿಯಿಂದ ಹೀಗೆ ಮಾಡಿದ್ದಾರೆ. ಕನ್ನಡದ ಹಲವು ಛಂದೋಬಂಧಗಳ ಹೋಲಿಕೆ ತಮಿಳಿನಲ್ಲಿ ಕಂಡು ಬರುವುದನ್ನು ತೋರಿಸಿಕೊಟ್ಟು ಆ ಕನ್ನಡ ಬಂಧಗಳ

ಲಕ್ಷಣ ವಿವರಣೆಗೆ ಅದರಿಂದ ಸಹಾಯಪಡೆಯಬೇಕೆಂದು ಸೂಚಿಸಿದ್ದಾರೆ.

ಹೀಗೆ ಈ ಲೇಖನದಲ್ಲಿ ಕನ್ನಡ ಛಂದಸ್ಸಿನ ಸಮಗ್ರ ಇತಿಹಾಸವನ್ನು ವಿಶ್ಲೇಷಿಸಲು ಹೋಗಿದ್ದಾರೆ. ಅನ್ಯಭಾಷೆಗಳ ಛಂದಸ್ಸುಗಳ ಪ್ರಭಾವವನ್ನು ಗುರುತಿಸಿ ತಿಳಿಸಿದ್ದಾರೆ. ಇಷ್ಟಾದರೂ ಇಂಗ್ಲಿಷ್ ಛಂದಸ್ಸಿನ ಬಗ್ಗೆ ಮಾತ್ರ ಚಕಾರವೆತ್ತಿಲ್ಲ: ಅದರ ಪ್ರಭಾವದಿಂದ ಮೂಡಿದ ಹೊಸಗನ್ನಡ ಬಂಧಗಳನ್ನು ವಿಶ್ಲೇಷಿಸಲು ಹೋಗಿಲ್ಲ. ಬದಲಾಗಿ, "ಇಂಗ್ಲಿಷ್ ಛಂದಸ್ಸಿನ ಪ್ರಭಾವವನ್ನೂ ಸಹಾಯವನ್ನೂ ಬೇರೆ ಕಡೆ ವಿಮರ್ಶಿಸಲಾಗುತ್ತದೆ. ಕನ್ನಡದ ಛಂದಸ್ಸಿನ ತಾಯಿಬೇರಿನ ಮೇಲೆ ಹೊಸ ಸೌಂದರ್ಯವನ್ನು ಕಸಿಮಾಡಿ ಕಟ್ಟಿ ಬೆಳೆಸುವವರು ಈ ವಿಮರ್ಶೆಯನ್ನು ಮುಂದುವರಿಸಬೇಕು.[11] ಎಂದು ಹೇಳಿದ್ದಾರೆ. ಆದರೆ ಅದನ್ನು ಕುರಿತು ಅವರು ಹಾಗೆ ಬೇರೆಲ್ಲೂ ಬರೆದಂತೆ ಕಾಣುವುದಿಲ್ಲ. ಅಥವಾ ಬರೆದಿದ್ದರೂ ಪ್ರಕಟವಾಗುವ ಭಾಗ್ಯ ಅದಕ್ಕೆ ಒದಗಿ ಬರಲಿಲ್ಲವೆಂದು ತೋರುತ್ತದೆ.

A Hand Book of Rhetoric ನ Rhythm in verse and prose ಎಂಬ ಮೂರನೆಯ ವಿಭಾಗವು ಮಾತ್ರ ಇಂಗ್ಲಿಷ್ ಛಂದಸ್ಸಿನ ವಿವರಣೆಗೇ ಮೀಸಲಾಗಿದೆ. ಆದರೆ ಅದು ಇಂಗ್ಲಿಷ್ ಸಾಹಿತ್ಯಾಭ್ಯಾಸಿಗಳಿಗಾಗಿ ಬರೆದದ್ದೆಂಬುದು ಸ್ಪಷ್ಟ ; ಕನ್ನಡಕ್ಕೂ ಅದಕ್ಕೂ ಸಂಬಂಧ ವಿಲ್ಲ. ಹೀಗಿದ್ದರೂ, ಕನ್ನಡ ಛಂದಸ್ಸಿನ ಅಭ್ಯಾಸಿಗಳಿಗೆ ಇದರ ಅಧ್ಯಯನದಿಂದ ಆಗುವ ಲಾಭ ಮಾತ್ರ ಅಪಾರ. ಪ್ರಧಾನವಾಗಿ, ಕನ್ನಡ ಛಂದಸ್ಸನ್ನು ಯಾವ ರೀತಿಯಲ್ಲಿ ಅಧ್ಯಯನ ಮಾಡಬೇಕು ಎಂಬುದಕ್ಕೆ ಇದು ಮಾರ್ಗದರ್ಶಕವಾಗಿದೆ. ಅಂತೆಯೇ ಹೊಸಗನ್ನಡ ಛಂದಸ್ಸಿನ ವಿಶ್ಲೇಷಣೆಗೆ ಅಗತ್ಯವಾದ ಇಂಗ್ಲಿಷ್ ಛಂದಸ್ಸಿನ ಜ್ಞಾನದ ಹಿನ್ನೆಲೆ ಇದರಿಂದ ದೊರೆಯುತ್ತದೆ.

ಭಾರತೀಯ ವಿದ್ಯಾರ್ಥಿಯು ಇಂಗ್ಲಿಷ್ ಸಾಹಿತ್ಯವನ್ನು ಓದಿ ಆಸ್ವಾದಿಸಲು ಅಗತ್ಯವಾದಷ್ಟು ವಿಚಾರಗಳನ್ನು ಮಾತ್ರ ಈ ವಿಭಾಗದಲ್ಲಿ ನಿರೂಪಿಸಲಾಗಿದೆ. ಹಾಗಾಗಿ ಸಂಗ್ರಹಗುಣ ಉದ್ದಕ್ಕೂ ಕಾಣುತ್ತದೆ. ಈ ಚೌಕಟ್ಟಿನಲ್ಲಿ ಪಾದ, ಗಣದ ಪ್ರಕಾರಗಳು, ಘಾತ, ಯತಿ, ಛಂದಸ್ಸಮಾನತೆ, ಪ್ರಸ್ತಾರ ಹಾಕುವಿಕೆ–ಈ ಮೂಲಾಂಶಗಳನ್ನು ಮೊದಲು ನಿರೂಪಿಸಿದ್ದಾರೆ. ಎರಡನೆಯದಾಗಿ, ಛಂದಸ್ಸಿನ ಅಲಂಕಾರದ ಅಂಶಗಳಾದ ಪ್ರಾಸ, ಅದರ ಪ್ರಕಾರಗಳು ಮತ್ತು ಇತಿಹಾಸ, ಪಲ್ಲವಿ, ಅನುಪ್ರಾಸ, ಸ್ವರಸಾಮ್ಯತೆ ಇವುಗಳ ಬಗ್ಗೆ ಹೇಳಿದ್ದಾರೆ. ಅನಂತರ ಛಂದಃ ಪ್ರಕಾರಗಳನ್ನು ಕುರಿತಂತೆ ಹೀರೋಯಿಕ್ ಕಪ್ಲೆಟ್, ಬ್ಲ್ಯಾಂಕ್ ವರ್ಸ್, ಹೆಕ್ಸಾಮೀಟರ್, ಚೌಪದಿ, ಬ್ಯಾಲೆಡ್‌ಸ್ಟ್ಯಾಂಜಾ ಎಲಿಜಿಯಾಕ್ ಸ್ಟ್ಯಾಂಜಾ, ತ್ರಿಪದಿಗಳು, ಟರ್ಜಾರೈಮಾ ಟ್ರಾಕೇಯಿಕ್‌ಗಳು, ಬರ್ನ್ಸ್‌ಸ್ಟ್ಯಾಂಜಾ ರೈಮ್‌ರಾಯಲ್ ಮುಂತಾದ ಷಟ್ಪದಿಪ್ರಕಾರಗಳು, ಒಟ್ಟಾವಾರೈಮ್, ಸ್ಪೆನ್ಸೇರಿಯನ್ ಸ್ಟ್ಯಾಂಜಾ ಈ ಅಷ್ಟಪದಿಗಳು ಇವುಗಳ ವಿವರಣೆ ಬಂದಿದೆ. ಛಂದಸ್ಸಿನಿಂದಾಗುವ ಸಾಮಾನ್ಯ ಪ್ರಯೋಜನಗಳು ಮತ್ತು ಸೌಂದರ್ಯ ದೃಷ್ಟಿಯ ಪ್ರಯೋಜನಗಳು–ಇವನ್ನು ಕುರಿತಂತೆ ಅಲ್ಲಿಂದ ಮುಂದಕ್ಕೆ ವಿವರಿಸಲಾಗಿದೆ. ಅನಂತರ ಶತಮಾನ ವಿಂಗಡಣೆಯ ಆಧಾರದ ಮೇಲೆ ಇಂಗ್ಲಿಷ್ ಛಂದಸ್ಸಿನ ಇತಿಹಾಸವನ್ನು ನಿರೂಪಿಸಿ, ಅನ್ಯಛಂದಸ್ಸುಗಳು ಇಂಗ್ಲಿಷ್ ಛಂದಸ್ಸಿನ ಮೇಲೆ ಬೀರಿದ ಪರಿಣಾಮವನ್ನು ಕುರಿತ ವಿಚಾರವನ್ನು ಅದಕ್ಕೆ ಕೂಡಿಸಿದ್ದಾರೆ. ಕೊನೆಗೆ, ಗದ್ಯದ ಲಯವನ್ನು ಕುರಿತ ವಿವರಣೆ ಬರುತ್ತದೆ. Sainstbury I ಅವರ History of English Prosody ಯ ಸಂಪುಟಗಳು, Historical Manual of English Prosody, History of English prose Rhythm ಗಳಂತಹ ಕೃತಿಗಳು ಈ ವಿಭಾಗದ ರಚನೆಯಲ್ಲಿ ಸಹಾಯಕ್ಕೆ ಒದಗಿವೆ.

ಹೀಗೆ ಛಂದಸ್ಸಿನ ಕ್ಷೇತ್ರದಲ್ಲಿ ವಿವಿಧ ಮುಖಗಳಲ್ಲಿ ಶ್ರೀಯವರು ಕೈಯಾಡಿಸಿದ್ದಾರೆ. ಈ ಕ್ಷೇತ್ರಕ್ಕೆ ಅವರು ಕೊಟ್ಟ ಕೊಡುಗೆಗಳಲ್ಲಿ ಪ್ರಧಾನವಾದುವನ್ನು, ಈವರೆಗಿನ ವಿವೇಚನೆಯ ಆಧಾರದ ಮೇಲೆ ಹೀಗೆ ಪಟ್ಟಿ ಮಾಡಬಹುದು

1. ದ್ರಾವಿಡ ಛಂದಸ್ಸಿನ ತೌಲನಿಕ ಅಧ್ಯಯನ, ದ್ರಾವಿಡ ಜನಪದಗೀತೆಗಳ ಛಂದಸ್ಸಿನ ತೌಲನಿಕ ಅಧ್ಯಯನ, ವೈದಿಕ ಛಂದಸ್ಸಿನ ಅಧ್ಯಯನ, ಯಕ್ಷಗಾನ ಮುಂತಾದವುಗಳಲ್ಲಿ ಪ್ರಯೋಗವಾಗಿರುವ ಬಂಧಗಳ ಛಂದಸ್ಸಿನ ಅಧ್ಯಯನ, ಇಂಗ್ಲಿಷ್ ಛಂದಸ್ಸಿನ ಅಧ್ಯಯನ ಇವು ಕನ್ನಡ ಛಂದಸ್ಸಿನ ಅಭ್ಯಾಸಿಗಳಿಗೆ ಅಗತ್ಯವೆಂಬುದನ್ನು ತೋರಿಸಿಕೊಟ್ಟದ್ದು ;

2. ಕನ್ನಡ ಛಂದಸ್ಸಿಗೆ ಒಂದು ಚರಿತ್ರೆಯಿದೆಯೆಂಬುದನ್ನೂ, ಛಂದಸ್ಸಿನ ಮೂಲಾಂಶಗಳನ್ನಾಗಲೀ ಬಂಧಗಳನ್ನಾಗಲೀ ಅವುಗಳ ಹುಟ್ಟು ಮತ್ತು ಬೆಳವಣಿಗೆಯ

ಚಾರಿತ್ರಿಕದೃಷ್ಟಿಯಿಂದ ಅಧ್ಯಯನ ಮಾಡಬೇಕೆಂಬುದನ್ನೂ ತೋರಿಸಿಕೊಟ್ಟದ್ದು :

3. ಕನ್ನಡದ ಹಲವು ಸಮಸ್ಯಾತ್ಮಕ ಬಂಧಗಳ ಲಕ್ಷಣವನ್ನು ವಿವರಿಸಲು ಪ್ರಯತ್ನಿಸಿದ್ದು :

4. ಸಾಧ್ಯವಿದ್ದ ಮಟ್ಟಿಗೂ ಚಾರಿತ್ರಿಕ ವಿಧಾನವನ್ನು ಹಿಡಿದು, ಮೊದಲ ಬಾರಿಗೆ ಕನ್ನಡ ಛಂದಸ್ಸಿನ ವಿಶ್ಲೇಷಣೆಗೆ ಪ್ರಯತ್ನಿಸಿದ್ದು, ಹಲವು ಬಂಧಗಳ ಮೂಲವನ್ನು ಊಹಿಸಿದ್ದು ಮತ್ತು ಆ ಮೂಲಕ ಆ ದಿಶೆಯಲ್ಲಿ ನಡೆಯುವವರಿಗೆ ಮಾರ್ಗತೋರಿಸಿಕೊಟ್ಟದ್ದು :

5. ಕನ್ನಡ ಛಂದಸ್ಸಿನ ಚರಿತ್ರೆಯನ್ನು ಮೊದಲ ಬಾರಿಗೆ ವಿಶಿಷ್ಟ ದೃಷ್ಟಿಕೋನದಿಂದ, ಸಮಗ್ರವಾಗಿ ಆದರೆ ಸಂಗ್ರಹವಾಗಿ ನಿರೂಪಿಸಿದ್ದು :

6. ತಮಿಳು ತನ್ನಲ್ಲಿ ದ್ರಾವಿಡತನವನ್ನು ಹೆಚ್ಚಾಗಿ ಉಳಿಸಿಕೊಂಡಿರುವುದರಿಂದ ಕನ್ನಡದ ಹಲವು ಸಮಸ್ಯಾತ್ಮಕ ಬಂಧಗಳ ಲಕ್ಷಣಗಳನ್ನು ಅರಿಯುವಲ್ಲಿ ತಮಿಳಿನ ಸಹಾಯವನ್ನು ವಿಶೇಷವಾಗಿ ಪಡೆಯಬೇಕೆಂದು ತೋರಿಸಿಕೊಟ್ಟದ್ದು:

7. ತ್ರಿಮೂರ್ತಿಗಣಗಳನ್ನು ದ್ರಾವಿಡ ಗಣಗಳ ಹಿನ್ನೆಲೆಯಲ್ಲಿ ವಿಶ್ಲೇಷಿಸಿದ್ದು ಮತ್ತು ಅವುಗಳ ಮೂಲ ಘಟಕಗಳಿಗೆ ಅಂಶವೆಂದು ಹೆಸರಿಟ್ಟದ್ದು :

8. ಮಾತ್ರಾಗಣಗಳಿಗೆ ರಗಳೆಗಳ ಆಧಾರದ ಮೇಲೆ ಉತ್ಸಾಹ. ಮಂದಾನಿಲ ಮತ್ತು ಲಲಿತ ಎಂದು ಹೆಸರಿಟ್ಟದ್ದು :

9. ಭಾಷೆಯ ವ್ಯತ್ಯಾಸದಿಂದ ಬಂಧಗಳ ಮೇಲಾಗುವ ಪರಿಣಾಮವನ್ನು ನಿರೂಪಿಸಿದ್ದು –ಎಂಬುದಾಗಿ.

ಶ್ರೀಯವರ ಅಭಿಪ್ರಾಯಗಳಲ್ಲಿ ಇಂದು ನಮಗೆ ಹಲವು ಅರೆಕೊರೆಗಳು ಕಾಣಬಹುದು. ಇಷ್ಟು ಮಾತ್ರದಿಂದಲೇ ಅವರ ಪ್ರಯತ್ನವನ್ನು ಅಪಮೌಲ್ಯಗೊಳಿಸಬಾರದು. ಅವರ ಕಾಲದಲ್ಲಿ ಸಾಮಗ್ರಿಗಳಿಗೆ ಇದ್ದ ಕೊರತೆಯೇ ಇದಕ್ಕೆ ಕಾರಣ. ಮೇಲಾಗಿ, ನಮ್ಮ ಇಂದಿನ ಎಲ್ಲ ಛಂದೋವಿಶ್ಲೇಷಣೆಗಳಿಗೂ ಅವರ ಪ್ರಯತ್ನಗಳೇ ಆಧಾರಭೂತವಾಗಿವೆಯೆಂಬುದನ್ನು ಮರೆಯಬಾರದು ; ಅಷ್ಟಕ್ಕೆ ದಿಟ್ಟಿಣಿಯನ್ನು ಹಳಿಯಬಾರದು.

**ಅಡಿ ಟಿಪ್ಪಣಿಗಳು**

1. ಶ್ರೀ ಸಾಹಿತ್ಯ, ಪು. ೨೫೫ ; 2, 3. ಅದೇ, ಪು. ೩೪೮ ; 4. ಅದೇ, ಪು. ೩೪೭
5. ಅದೇ, ಪು, ೫೩೫ ; 6. ಅದೇ, ಪು. ೫೪೦ ; 7, 8. ಅದೇ, ಪು. ೫೪೫ ;
9. ಅದೇ, ಪು. ೫೪೭ ; 10. ಅದೇ, ಪು. ೫೭೫ ; 11. ಅದೇ, ಪು. ೫೭೭.

“ ‘ಶ್ರೀಗಂಧಕುಟಿ’ ಎಂಬುದು ಸೆಂಟ್ರಲ್ ಕಾಲೇಜಿನಲ್ಲಿ ಕನ್ನಡ ಎಂ.ಎ., ಗೆ ಓದುತ್ತಿರುವವರ ಅನುಕೂಲಕ್ಕಾಗಿ ಸ್ಥಾಪಿಸಿರುವ Reference Library. ಈ ವಿಭಾಗವನ್ನು ದಿವಂಗತ ಬಿ. ಎಂ. ಶ್ರೀಕಂಠಯ್ಯನವರ ಜ್ಞಾಪಕಾರ್ಥವಾಗಿ ತೆರೆಯಲಾಗಿದೆ. ‘ಶ್ರೀ ಗಂಧಕುಟಿ’ ಯ ಮೊದಲಿನ ‘ಶ್ರೀ’ ಎಂಬುದು ಬಿ. ಎಂ. ಶ್ರೀಕಂಠಯ್ಯನವರ ಕಾವ್ಯನಾಮ. ‘ಗಂಧಕುಟಿ’ ಎಂಬುದು ಭಗವಂತನಾದ ಬುದ್ಧನು ವಾಸಮಾಡುತ್ತಿದ್ದ ಕುಟೀರದ ಹೆಸರು. ಬುದ್ಧನು ಜ್ಞಾನಸ್ವರೂಪಿ. ಬುದ್ಧನ ಭಾಷಾ ಪ್ರೇಮ, ಆತನ ಉದಾರವಾದ ಧರ್ಮ ಶ್ರೀಯವರಿಗೆ ಪ್ರಿಯವಾಗಿತ್ತು. ಆದ್ದರಿಂದ ಅವರ ಜ್ಞಾಪಕಾರ್ಥವಾದ ಗ್ರಂಥಸಮುದಾಯದ ಆವಾಸವನ್ನು ‘ಶ್ರೀಗಂಧಕುಟಿ’ ಎಂದು ಕರೆದಿರುವುದು ಉಚಿತವಾಗಿದೆ ”

ಜಿ. ಪಿ. ರಾಜರತ್ನಂ
ವಿಚಾರ ತರಂಗ



# 'ಶ್ರೀ'ಯವರ 'ಅಶ್ವತ್ಥಾಮನ್' ಒಂದು ಅಭ್ಯಾಸ

**ತಾಳ್ತಜೆ ವಸಂತಕುಮಾರ**

ಕನ್ನಡ ನಾಟಕ ಪರಂಪರೆಯಲ್ಲಿ ಪ್ರಧಾನವಾಗಿ ಗಮನಿಸಬೇಕಾದ ಕೃತಿ 'ಅಶ್ವತ್ಥಾಮನ್'. ಐತಿಹಾಸಿಕವಾಗಿ ಸಿಂಗರಾರ್ಯನ 'ಮಿತ್ರಾವಿಂದಾ ಗೋವಿಂದ' ಗಮನಾರ್ಹವಾದರೂ ಕಲಾಕ್ಷೇತ್ರಕ್ಕೆ ಹೊಸ ಆಯಾಮ ಕಲ್ಪಿಸುವುದರ ಮೂಲಕ ಸತ್ವ, ಸ್ವತ್ವಗಳನ್ನು ತುಂಬಿದ್ದು 'ಶ್ರೀ' ಯವರ 'ಅಶ್ವತ್ಥಾಮನ್' ಎಂತಲೇ ಹದಿನೇಳು-, ಇಪ್ಪತ್ತನೆಯ ಶತಮಾನಗಳ ನಡುಗಾಲದ ಸಾಮಾನ್ಯ ಮಟ್ಟದ ಕೃತಿಗಳಿಂದಾಗಿ ಉಂಟಾದ ಅರಕೆಯನ್ನು ಇದು ತುಂಬಿಕೊಟ್ಟಿತು. ಮಾತ್ರವಲ್ಲ, ಅನಂತರದ ಪೈಯವರ 'ಹೆಬ್ಬೆರಳು' ಕುವೆಂಪುರವರ 'ಬೆರಳ್ಗೆ ಕೊರಳ್' ಇಂಥವಕ್ಕೂ ಪ್ರತ್ಯಕ್ಷ ಇಲ್ಲವೆ ಪರೋಕ್ಷ ಪ್ರಭಾವ ಸ್ಫೂರ್ತಿಗಳ ಕೇಂದ್ರವಾಯಿತು. ಕನ್ನಡ ರಂಗಭೂಮಿಗೆ 'ಇಂತಪ್ಪನ್ ಇಲ್ಲಮೆಂದಾಗಿರ್ದನ್' ಎಂಬ ಬಗೆಯಲ್ಲಿ ಗ್ರೀಕ್ ರುದ್ರ ನಾಟಕಕಾರ ಸಾಫೊಕ್ಲಿಸನ 'ಏಜ್ಯಾಕ್ಸ್' (ಅಯಾಸ್) ಮತ್ತು ಮಹಾಭಾರತದ ಗದಾ–ಸೌಪ್ತಿಕ ಪರ್ವಗಳ ಕಥೆಗಳ ಕಸಿಕಟ್ಟುವಿಕೆ ಶ್ರೀಯವರು ಕೈಗೊಂಡ ಇನ್ನೊಂದು ಬಗೆಯ 'ಅವಳ ತೊಡುಗೆ ಇವಳಿಗಿಟ್ಟು' ಹಾಡಬಯಸಿದ ಉಪಕ್ರಮವೇ ಆಗಿದೆ.

ಶ್ರೀಯವರ ನಾಟಕಗಳು ಮತ್ತು ಕಾವ್ಯಸೃಷ್ಟಿಯ ಬಗೆಗೆ ಸಾಕಷ್ಟು ವಿಮರ್ಶೆ, ವಿವೇಚನೆಗಳು ಈಗಾಗಲೇ ನಡೆದಿವೆ. 'ಅಶ್ವತ್ಥಾಮನ್' ಬಗ್ಗೆ ವಿವೇಚಿಸುವ ಗ್ರಂಥವನ್ನೇ ವಿ.ಸೀ. ಯವರು ಬರೆದಿದ್ದಾರೆ. ಬಿಡಿ ಲೇಖನಗಳಂತೂ ಅಗಣಿತ. ಮುಖ್ಯವೆನಿಸಿದವುಗಳನ್ನು ಗಮನಿಸಿ ಒಟ್ಟಾರೆಯಾಗಿ ಈ ನಾಟಕದ ಮೌಲಿಕತೆಯನ್ನೂ ಪರಿಗಣಿಸಿ ಈ ಟಿಪ್ಪಣಿಯನ್ನು ಬರೆಯಲಾಗಿದೆ.

ತನ್ನ ಯುಗದ ಮೌಲ್ಯಗಳಿಗೆ ಸ್ಪಂದಿಸುವ ಸಾಹಿತಿಯ ಸೃಷ್ಟಿಶೀಲ ಕೃತಿಗಳು ಮಾತ್ರ ಬದುಕಿಗೆ ಹತ್ತಿರವೆನಿಸುತ್ತವೆ. ಸಾಹಿತಿ ಸಾಹಿತ್ಯವನ್ನು ಸೃಷ್ಟಿಸುತ್ತಾನೆ. ಆದರೆ ಮೂಲಭೂತವಾಗಿ ಬದುಕೇ ಸಾಹಿತಿಯನ್ನು ಸೃಷ್ಟಿಸುತ್ತದೆ. ಅವನ ವೈಯುಕ್ತಿಕ ರಾಗ-ದ್ವೇಷಗಳು, ನೋವು-ನಲಿವುಗಳು, ಜೀವನವನ್ನು ನೋಡುವ ದೃಷ್ಟಿ, ಕಂಡುಕೊಂಡ ಆದರ್ಶಗಳು ಒಂದು ನಿಶ್ಚಿತ ಆವರಣದಲ್ಲಿ ಕ್ರಿಯಾಶೀಲವಾದಾಗಷ್ಟೇ ಶ್ರೀಮಂತ ಕೃತಿಗಳು ಹೊರಬರುತ್ತವೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಸಾರಸ್ವತ ಜಗತ್ತಿಗೆ ತನ್ನ ಕೊಡುಗೆ ಉತ್ಕೃಷ್ಟ ಹಾಗೂ ನವೀನವಾಗಬೇಕೆಂಬ ಹಂಬಲವಿದ್ದಾಗ ಮಾತ್ರ ಸಾಹಿತಿ ಹೊಸ ಹೊಸ ಸಾಧ್ಯತೆಗಳನ್ನು ಅನ್ವೇಷಿಸುತ್ತಾನೆ. ತಂತ್ರ, ಶೈಲಿ, ಭಾಷೆ, ವಸ್ತುಗಳಲ್ಲಿ ಸಂಪ್ರದಾಯದ ಜಾಡು ಬಿಟ್ಟ ಕೃತಿಗಳು ಒಂದು ಹೊಸ ಯುಗದ ನಾಂದಿ ಹಾಡುತ್ತವೆ. ಆದಿಕವಿ ಪಂಪನಾಗಲಿ, ನವೋದಯ, ನವ್ಯ ದಲಿತ ಪಂಥಗಳ ಹರಿಕಾರರಾಗಲಿ ಸಾಧಿಸಿದ್ದು ಇದನ್ನೆ. ಇದರಿಂದ ಅಭಿವ್ಯಕ್ತಿ ಮಾಧ್ಯಮ ಯುಗದಿಂದ ಯುಗಕ್ಕೆ ಭಿನ್ನವಾಗುತ್ತಾ ಹೋಗುತ್ತದೆ. ಶ್ರೀಯವರು ಇಂಥ ಹೊಸ ಕಾವಿನ ಸಾಹಿತಿ. ಆ ಅರ್ಥದಲ್ಲೇ ಅವರ ಇಂಗ್ಲಿಷ್ ಗೀತೆಗಳಾಗಲೀ, ಅಶ್ವತ್ಥಾಮನ್ ಆಗಲಿ ಯುಗ ಪ್ರವರ್ತಕ ಕೃತಿಗಳಾಗುತ್ತವೆ, ಆಚಾರ್ಯ ಕೃತಿಗಳೆಂಬ ಸಾರ್ಥಕ್ಯಕ್ಕೆ ಸಲ್ಲುತ್ತವೆ.

ಯಾವುದೇ ಸಾಹಿತ್ಯಕೃತಿಯ ಉತ್ಕೃಷ್ಟತೆ ಅದು ಪ್ರತಿಪಾದಿಸುವ ಮಾನವೀಯ ಮೌಲ್ಯಗಳಲ್ಲಿ ಅಡಗಿರತ್ತದೆ. ಈ ಹಿನ್ನೆಲೆಯಲ್ಲಿ 'ಅಶ್ವತ್ಥಾಮನ್'ನ್ನು ವಿವೇಚಿಸುವುದು ಹೆಚ್ಚು ಔಚಿತ್ಯಪೂರ್ಣವಾಗಬಹುದೇನೋ. ಒಂದು ಸಾವನ್ನು ರಂಗದಲ್ಲಿ ಪ್ರದರ್ಶಿಸುವುದಷ್ಟೇ ನಾಟಕ ದುರಂತವೆನಿಸಲಾರದು. ಆ ದುರಂತ ಸಹೃದಯರನ್ನು ಗಾಢವಾಗಿ ತಟ್ಟಬೇಕಾದರೆ ಅದಕ್ಕೆ ತಕ್ಕ ಹಿನ್ನೆಲೆಯನ್ನು ನಾಟಕಕಾರ ಕಲ್ಪಿಸಿಕೊಳ್ಳಬೇಕಾಗುತ್ತದೆ. ಹ್ಯಾಮ್ಲೆಟನ ದುರಂತವನ್ನಾಗಲೀ ಈಡಿಪಸ್ಸನ ದುರಂತವನ್ನಾಗಲಿ ಗಮನಿಸಿದಾಗ ಈ ವ್ಯತ್ಯಾಸ ಸ್ಪಷ್ಟವಾಗುತ್ತದೆ. ಹ್ಯಾಮ್ಲೆಟನ ರಸಿಕ, ಮುಗ್ಧ, ಪ್ರೇಮಮಯ ಹೃದಯಕ್ಕೆ ತಗಲುವ ಆಘಾತಕ್ಕೆ ಏನನ್ನು ತಾನೇ ಹೋಲಿಸಬಹುದು ? ಈ ಅರ್ಥದಲ್ಲಿಯೇ ಕಾಳಿದಾಸನ ಶಾಕುಂತಲವಾಗಲಿ, ಶೇಕ್ಸ್‌ಪಿಯರನ ಹ್ಯಾಮ್ಲೆಟ್ ಆಗಲಿ ವಿಶ್ವಮಾನ್ಯ ಕೃತಿಗಳೆನಿಸುತ್ತವೆ : ದೇಶ ಕಾಲಗಳ ಸೀಮಿತ ಪರಿಧಿಯನ್ನು ದಾಟಿ ಅವುಗಳ ಮಾನವೀಯ ದೃಷ್ಟಿಕೋನ ಬೆಳೆದು ಬಿಡುತ್ತದೆ.

ದುರ್ಯೋಧನಾವಸಾನದ ಅನಂತರದ ಕುರುಕ್ಷೇತ್ರ 'ಪ್ರಿಯತಮ ಸ್ವಾಮಿ'ಯ ಸಾವಿನ ಸೇಡನ್ನು ತೀರಿಸುವ ಹೆಬ್ಬಯಕೆ ಹೊತ್ತ ಅಶ್ವತ್ಥಾಮ. ಅವನಿಗೆ ತನ್ನ ಭುಜಬಲದ ಮೇಲೆ ಅಮಿತ ವಿಶ್ವಾಸ. ಆ ಅಹಮಿಕೆಯಿಂದ ಸರ್ವಶಕ್ತನಾದ ರುದ್ರನನ್ನು ಆತ ಧಿಕ್ಕರಿಸುತ್ತಾನೆ, ಇದರಿಂದ ರುದ್ರನ ಅಹಂಕಾರಕ್ಕೆ ಘಾಸಿಯಾಗುತ್ತದೆ. ಅದರೊಂದಿಗೆ ಸಾತ್ವಿಕರಾದ, ಕೃಷ್ಣನನ್ನೊಡಗೂಡಿದ ಪಾಂಡವರ ಕ್ಷೇಮ ಚಿಂತನೆಯೂ ಪ್ರವೃತ್ತವಾದುದರಿಂದ ಆತ ಅಶ್ವತ್ಥಾಮನ ಮತಿಗೆ ಮಾಯೆ ಮುಸುಕುವಂತೆ ಮಾಡುತ್ತಾನೆ. ಈ ಉನ್ಮತ್ತ ಸ್ಥಿತಿಯಲ್ಲಿ, ಪಾಂಡವರೆಂಬ ಭ್ರಾಂತಿಗೆ ಒಳಗಾಗಿ ಆತ ನಿರ್ದೋಷಿಗಳಾದ ಸ್ತ್ರೀಯರನ್ನು, ಮುಗ್ಧ ಮಕ್ಕಳನ್ನು, ಅಮಾಯಕ ಪಶುಗಳನ್ನು ಅಮಾನುಷವಾಗಿ ಹಿಂಸಿಸಿ ಕೊಲ್ಲುತ್ತಾನೆ. ಅರಿವು ಮರಳಿದ ಬಳಿಕ, ಈ ಕುಕೃತ್ಯಕ್ಕಾಗಿ ಅವನ ಆತ್ಮ ನೋವಿನಿಂದ ಚೀತ್ಕರಿಸುತ್ತದೆ. ಈ ಆಂತರಿಕ ವೇದನೆ ಅತ್ಯಧಿಕವಾದಾಗ ಆತ ನೆಲದಲ್ಲಿ ನೆಟ್ಟ ಕತ್ತಿಗೆ ತನ್ನ ಪ್ರಾಣವನ್ನು ಅರ್ಪಿಸುತ್ತಾನೆ. ವೃದ್ಧೆ ಭಾರ್ಗವಿಯ ವಾತ್ಸಲ್ಯವಾಗಲಿ, ಎಳೆಯ ಬಾಲಕ ರುದ್ರಶಕ್ತಿಯ ಅನಾಥತ್ವದ ಕಲ್ಪನೆಯಾಗಲಿ ಅವನನ್ನು ಬದುಕಿಗೆ ಬಂಧಿಸಲು ಶಕ್ಯವಾಗುವುದಿಲ್ಲ. ಅವರ ರಕ್ಷಣೆಯ ಹೊಣೆಯನ್ನು ಗೆಳೆಯ ಏಕಲವ್ಯನ ಸಮರ್ಥ ಹೆಗಲಿಗೆ ಹೊರಿಸಿದ ನಿಶ್ಚಿಂತೆಯಿಂದ ಆತ ಬದುಕಿಗೆ ಬೆನ್ನು ತಿರುಗಿಸಿ ನಡೆದು ಬಿಡುತ್ತಾನೆ. ದುಃಖಭಾರದಿಂದ ಬಾಗಿದ ಏಕಲವ್ಯ ಇನ್ನೇನು ಶವ ಸಂಸ್ಕಾರಕ್ಕೆ ಉದ್ಯುಕ್ತನಾಗಬೇಕು, ಅಷ್ಟರಲ್ಲಿ ಭೀಮ ಹಠಾತ್ತನೆ ಪ್ರವೇಶಿಸಿ ಆ ಹೆಣವನ್ನು ಹದ್ದು ನಾಯಿಗಳಿಗೆ ಎಸೆಯುತ್ತೇನೆನ್ನುತ್ತಾನೆ. ಇದರಿಂದ ಮತ್ತೆ ಏಕಲವ್ಯ ಭೀಮರ ಮಧ್ಯೆ ಯುದ್ಧದ ಕಿಡಿ ಹತ್ತಿಕೊಂಡು ಉರಿಯು

ತ್ತದೆ. ಕೃಷ್ಣ ಸಕಾಲಿಕವಾಗಿ ಬಂದು ಭೀಮನನ್ನು ಸಂತೈಸಿ, ಮಡಿದ ವೀರನಿಗೆ ಶ್ರದ್ಧಾಂಜಲಿ ಅರ್ಪಿಸುತ್ತಾನೆ, ಸಂಸ್ಕಾರ ಕಾರ್ಯವನ್ನು ಸುಗಮಗೊಳಿಸುತ್ತಾನೆ ; ರುದ್ರ ಶಕ್ತಿಗೆ ಅವನ ಆಶೀರ್ವಾದದ ಶ್ರೀರಕ್ಷೆ, ದುಃಖಿತಪ್ತ ಭಾರ್ಗವಿಗೆ ಸಾಂತ್ವನದ ಅಮೃತ ಸೇಚನೆ. ಮೇಳ ನಾಯಕನು ರುದ್ರನ ನಿಗ್ರಹಾನುಗ್ರಹ ಶಕ್ತಿಯನ್ನು ಉದ್ಘೋಷಿಸುವುದರೊಂದಿಗೆ ನಾಟಕ ಮುಗಿತಾಯಕ್ಕೆ ಬರುತ್ತದೆ. ಸ್ಥೂಲವಾಗಿ ಇದಿಷ್ಟು 'ಅಶ್ವತ್ಥಾಮನ್' ರುದ್ರನಾಟಕದ ವಸ್ತು.

ಈ ನಾಟಕದಲ್ಲಿ ಘಟನೆಗಳ ಮಿಂಚಿನ ಗತಿ, ಅದರ ಒಂದು ಮಿತಿಯನ್ನು ಸೂಚಿಸುತ್ತದೆ. ನಾಟಕದ ಆರಂಭ ದಿಂದಲೇ ಸೂಕ್ಷ್ಮವಾಗಿರುವ ದುರಂತದ ಛಾಯೆ ಬರ ಬರುತ್ತ ದಟ್ಟವಾಗಿ, ಕೊನೆಗೆ ಇಡಿಯಾಗಿ ಆವರಿಸಿಕೊಂಡು, ನಾಟಕದ ಪಾತ್ರಗಳೊಂದಿಗೇ ಸಹೃದಯರಿಗೂ ಮೂಗುಬ್ಬಸ ಹುಟ್ಟಿಸುವಷ್ಟು 'ಅಶ್ವತ್ಥಾಮನ್' ಪರಿಣಾಮಕಾರಿಯಾಗದಿರುವುದಕ್ಕೆ ಇದೂ ಒಂದು ಕಾರಣ. ದಿಗ್ಭ್ರಮೆ ಹುಟ್ಟಿಸುವ ವೇಗದಲ್ಲಿ, ಒಂದು ದಿನದೊಳಗೆ ಇಡಿಯ ನಾಟಕ ಮುಗಿದು ಬಿಡುವುದಕ್ಕೆ ನಮ್ಮನ್ನು ನಾವು ಹೊಂದಿಸಿಕೊಳ್ಳಬೇಕಾಗುತ್ತದೆ. ಒಂದು ಪರಿಸರದಲ್ಲಿ ಜೀವಂತವಾಗುವ ಸಾಹಿತ್ಯ ಭಿನ್ನ ಸಂದರ್ಭದಲ್ಲಿಯೂ ಅಷ್ಟೇ ಪರಿಣಾಮಕಾರಿಯಾಗುತ್ತದೆಯೇ ? ಮೂಲಕ್ಕೆ ತೀರಾ ನಿಷ್ಠರಾಗಿರುವ ಶ್ರೀಯವರೂ ಈ ದೋಷದಿಂದ ಪೂರಾ ಪಾರಾಗಿಲ್ಲ. ಸಮಬಲರ ಮಧ್ಯೆ ಯುದ್ಧವಾದಾಗ ನಮ್ಮ ಮನಸ್ಸು ಸಂಪೂರ್ಣ ಚೈತನ್ಯವನ್ನು ಮೈಗೂಡಿಸಿ ಕೊಂಡು ಸ್ವಾಭಾವಿಕವಾಗಿ ಕುತೂಹಲತಾಳುತ್ತದೆ. ಆದರೆ ಇಲ್ಲಿ ಸೆಣಸಾಟ ದೈವದ ಎದುರು : ಈ ದೈವದ ಅತೀತತ್ವ, ಅದರೆದುರು ಮನುಷ್ಯನ ಅಸಹಾಯಕತೆ ನಮ್ಮಲ್ಲಿ ಒಂದು ತೆರೆದ ಹಿಂಜರಿಕೆಯನ್ನು ಹುಟ್ಟಿಸುತ್ತದೆ. ಎಷ್ಟಾದರೂ ಅದೊಂದು ಅಪರಿಚಿತ ಲೋಕ. ಮನುಷ್ಯ ನಿಗೆ ಮೀರಿದ ಶಕ್ತಿಗಳು ಆತನನ್ನು ಮನಬಂದಂತೆ ಆಡಿಸಿ ದಾಗ ನಮ್ಮ ಮನಸ್ಸೂ ನಿಷ್ಪಂದವಾಗಿ ಬಿಡುವ ಅಪಾಯ ಇದೆಯಲ್ಲವೆ ?

ಕೊನೆಗೂ, ಅಶ್ವತ್ಥಾಮನ ದುರಂತಕ್ಕೆ ಕಾರಣವಾದುದು ಯಾವುದು ? ಒಡೆಯನಿಗಿತ್ತ ಮಾತನ್ನು ಸಲಿಸದ ಅವನ ದೌರ್ಬಲ್ಯವೋ, ಭ್ರಾಂತಿಗೆ ವಶವಾಗಿ ನಗ್ನ ತಾಂಡವ ವಾಡಿದ ಅವನ ಕ್ರೌರ್ಯದ ಅರಿವೋ ಎಂಬ ಪ್ರಶ್ನೆ ನಮ್ಮಲ್ಲಿ ಮೂಡಿ ನಿಲ್ಲುತ್ತದೆ. ಬದುಕಿನ ಬಗೆಗೆ ಅಶ್ವತ್ಥಾಮನ ಕಾಳಜಿಗಳಾಗಲಿ, ಅವನ ಆಂತರಿಕ ದ್ವಂದ್ವ ವಾಗಲಿ ನಮಗೆ ನಿಗೂಢವಾಗಿಯೇ ಉಳಿಯುತ್ತದೆ. ಆತ ಏರಿದ ಎತ್ತರದ ಕಲ್ಪನೆ ನಮಗೆ ಬಾರದೆ ಹೋಗುವುದ ರಲ್ಲಿಯೇ ನಾಟಕದ ಸೋಲು ಅಡಗಿದೆ. ಹ್ಯಾಮ್ಲೆಟನ 'To be or not to be' ಸ್ವಗತದಲ್ಲಿ ವ್ಯಕ್ತವಾಗುವ ಅವನ ಜೀವನದ ಸೆಳೆತ, ಅದನ್ನೂ ಮೀರಿ ನಿಲ್ಲಬೇಕಾದ ಅನಿವಾರ್ಯತೆ ಇಲ್ಲಿ ಕಾಣುತ್ತದೆಯೇ ? ಮನುಷ್ಯನ ಹಸ್ತಕ್ಷೇಪವೇನೂ ಇಲ್ಲದೆ ಬದುಕಿನುದ್ದಕ್ಕೂ ನರಳಬೇಕಾಗಿ ಬಂದ, ಅದಕ್ಕಾಗಿ ಅಪಾರ ಬೆಲೆಯನ್ನು ತೆತ್ತ ಈಡಿಪಸ್ಸನ ದುರಂತದ ಛಾಯೆಯಾದರೂ ಇಲ್ಲಿದೆಯೇ ? ಈ ಎಲ್ಲಾ ಅಂಶಗಳನ್ನೂ ಇಲ್ಲಿ ನಿರ್ಲಕ್ಷಿಸಲಾಗಿದೆ ಎನ್ನದೆ ವಿಧಿಯಿಲ್ಲ. ಮೂಲ ಮಹಾಭಾರತದ ಅಶ್ವತ್ಥಾಮನನ್ನೇ ಎತ್ತಿ ಕೊಳ್ಳೋಣ. ಅಲ್ಲಿ ಚಿರಂಜೀವಿತ್ವದ ಶಾಪವನ್ನು ಪಡೆದುಕೊಂಡ ಅವನು ನಮ್ಮ ಕರುಣೆಗೆ ಪಾತ್ರನಾಗು ತ್ತಾನೆ. ನಿದ್ರಾಮಗ್ನರಾದ ಮುಗ್ಧ ಉಪಪಾಂಡವರ ಮುಖಗಳು ಬದುಕಿನುದ್ದಕ್ಕೂ ಅವನನ್ನು ಕಾಡುವ ರೀತಿ ನಮ್ಮನ್ನು ತಟ್ಟುತ್ತದೆ. ಇಲ್ಲಿ ನಾಟಕದ ಬಂಧ ಶಿಥಿಲವಾಗಿ ಬಿಡುವುದಕ್ಕೂ ಇದೇ ಕಾರಣ. ಆದರೆ ಶ್ರೀಯವರಿಗಿದ್ದ ತೊಡಕುಗಳನ್ನೂ ಸ್ಪಷ್ಟಪಡಿಸಿಕೊಳ್ಳಬೇಕು. ಮಹಾ ಭಾರತದ ಪಾತ್ರಗಳನ್ನು ಆರಿಸಿಕೊಂಡ ಅವರು ಆ ಪಾತ್ರ ಗಳ ಬಗೆಗೆ ಇಲ್ಲಿದ್ದ ಕಲ್ಪನೆಯನ್ನೂ ಭಂಗಿಸುವಂತಿರಲಿಲ್ಲ. ಅಂತೆಯೇ ಸಾಫೊಕ್ಲಿಸನ ಪಾತ್ರಗಳ ಸ್ವರೂಪವನ್ನೂ ಕೆಡಿಸು ವಂತಿರಲಿಲ್ಲ. ಈ ಚೌಕಟ್ಟಿನೊಳಗೆ ಅದನ್ನು ತುರುಕುವಾಗ ಕೊಂಚ ಏರು ಪೇರಾಗುವುದು ತೀರಾ ಸಹಜವೂ ಹೌದು.

ದುರ್ಯೋಧನನ ಮಾದರಿಯ ಮೂಲಕ ಈ ಮಾತನ್ನು ಸ್ಪಷ್ಟಪಡಿಸಬಹುದು. 'ಗದಾಯುದ್ಧ'ದ ದುರ್ಯೋಧನ ಕನ್ನಡ ಸಾಹಿತ್ಯ ಕಂಡ ಇನ್ನೊಬ್ಬ ದುರಂತ ನಾಯಕ. ಅವನ ವೈಭವ. ಗೆದ್ದೇ ಗೆಲ್ಲುವ ಛಲ, ಅದರೊಂದಿಗೇ ಅವನ ಶೌರ್ಯ–ಧೈರ್ಯಗಳನ್ನೂ, ಇನ್ನೊಂದು ಬದಿ ಯಲ್ಲಿ, ಅವಮಾನದ ನೋವಿನಿಂದ, ಶಾರೀರಿಕ ವೇದನೆ ಯಿಂದ ಎಲ್ಲಾ ಅರ್ಥದಲ್ಲಿ ಹುಡಿ ಹತ್ತಿ ಹೊರಳುತ್ತಿರುವ ಕುರುಕುಲ ಸಾರ್ವಭೌಮನನ್ನೂ ತೂಗಿ ನೋಡಿದರೆ, ಅವನ ದುರಂತ ನಮ್ಮನ್ನು ಎಷ್ಟು ಅಗಾಧವಾಗಿ ಆವರಿಸು ತ್ತದೆಂಬುದು ತಿಳಿಯುತ್ತದೆ. ಈ ತೆರೆದ ಸಮರ್ಥ ಹಿನ್ನೆಲೆಯ ಅಭಾವದಿಂದ ಅಶ್ವತ್ಥಾಮನ ಪಾತ್ರ ಸೊರಗಿ

ಕಳಾಹೀನವಾಗಿದೆ. ಬದುಕಿನ ಅದಮ್ಯ ಸೆಳೆತವನ್ನು ಮೀರಬೇಕಾದ ಅವಶ್ಯಕತೆ ಅವನಿಗೆ ಎಂದೂ ಬಂದಿಲ್ಲವೆಂದೇ ಹೇಳಬೇಕು. ರುದ್ರಶಕ್ತಿಯ ಮೇಲಿನ ಪುತ್ರವಾತ್ಸಲ್ಯವೂ ಅವನನ್ನು ಬದುಕಿನೊಂದಿಗೆ ಬೆಸೆಯುವ ತೀರಾ ದುರ್ಬಲ ತಂತುವಾಗಿ ಬಿಟ್ಟಿರುವುದೊಂದು ವಿಷಾದದ ಸಂಗತಿ. ಅತಿ ದೀರ್ಘವಾದ ಸಂಭಾಷಣೆಗಳೂ, ಭೂತಕಾಲದ ಘಟನೆಗಳ ನಿರೂಪಣೆಗಳೂ ಇದರ ನಾಟಕೀಯತೆಗೆ ಭಂಗ ತಂದಿವೆ. ಮೇಳ ನಾಯಕನ ಅಧಿಕ ಪ್ರಸಂಗವೂ (ಕೆಲವೆಡೆಗಳಲ್ಲಿ ಮಾತ್ರ) ದೈವದ ವಕೀಲಿಯೂ ಹಾಸ್ಯಾಸ್ಪದ. ಸಮಾಜ ವ್ಯಕ್ತಿಯ ಸ್ವಂತಿಕೆಯನ್ನು ಸಹಿಸುವುದಿಲ್ಲವೆನ್ನುವ ಸಾರ್ವಕಾಲಿಕ ಸತ್ಯದ ಪ್ರತಿಪಾದಕವಾಗಿ ಮಾತ್ರ ಮೇಳ ಔಚಿತ್ಯವನ್ನು ಕಾಯ್ದುಕೊಳ್ಳುತ್ತದೆ.

ಭೀಮನ ಪಾತ್ರವೂ ನಾಟಕದಲ್ಲಿ ಕಳೆಕಟ್ಟುವುದಿಲ್ಲ. 'ಸಾಹಸ ಭೀಮ ವಿಜಯ'ದ ಭೀಮನನ್ನು ಕಂಡು ಅನುಭವಿಸಿದ ಕನ್ನಡ ಸಾಹಿತ್ಯಕ್ಕೆ ಈ ಬರ್ಬರ ಭೀಮ ಅಪರಿಚಿತನಾಗಿ ಬಿಡುವುದಿಲ್ಲವೆ ? ಹೊಡೆದೊಡನೆಯೂ ಹಗೆ ಸಾಧಿಸುವಷ್ಟು ಕೀಳೇ ಅವನ ಸಂಸ್ಕಾರ ? ಪ್ರತಿನಾಯಕನನ್ನು ಈತನಿಗೆ ಬಲವಂತವಾಗಿ ಆರೋಪಿಸಲಾಗಿದೆ ಎನಿಸುತ್ತದೆ. ಮೂರು ತಲೆಮಾರುಗಳಲ್ಲಿ ನಡೆದ ಸಂಘರ್ಷಕ್ಕೆ. ಸಾವು ನೋವಿನ ಇತಿಹಾಸಕ್ಕೆ ಮೂಕ ಸಾಕ್ಷಿ ಭಾರ್ಗವಿಯ ಪಾತ್ರ ಅಲ್ಲಲ್ಲಿ ಬಹಳ ಪರಿಣಾಮಕಾರಿಯಾಗುತ್ತದೆ. ಆದರೆ ಅಶ್ವತ್ಥಾಮನ ಪಾತ್ರದ ಮೇಲೆ ಗೌರವ ಹುಟ್ಟಿಸಲು ಶ್ರೀಯವರು ವ್ಯರ್ಥ ಪ್ರಯತ್ನ ಕೈಗೊಂಡಂತಿದೆ! ಕ್ರಿಯಾಪೇಕ್ಷೆಯುಳ್ಳ ನಿರೂಪಣೆ ರಂಗದಲ್ಲಿ ಎಷ್ಟರ ಮಟ್ಟಿಗೆ ಸಫಲವಾಗಬಹುದು ; ಶ್ರೀಯವರ ನಿಷ್ಠುರ ವಿಮರ್ಶನ ಪ್ರಜ್ಞೆಗೆ ಗೌರವ ಸೂಚಿಸುವ ಸಂಕೇತವಾಗಿ ಅವರ ಕೃತಿಯನ್ನು ಈ ಓರೆಗಲ್ಲಿಗೆ ಹಚ್ಚುವುದು ಅನಿವಾರ್ಯವಾಯಿತು.

ನಾಟಕದ ಗುಣಾತ್ಮಕ ಅಂಶಗಳ ಬಗೆಗೆ ಗಮನ ಹರಿಸುವುದಾದರೆ. ಉನ್ಮತ್ತ ಅಶ್ವತ್ಥಾಮನ ಚಿತ್ರಣ ಅತ್ಯಂತ ಪ್ರಭಾವ ಬೀರುತ್ತದೆ. ಆತ ಹಂತ ಹಂತವಾಗಿ ಜಾಗ್ರತಾವಸ್ಥೆಗೆ ಮರಳುವ ಭಾಗವಂತೂ ಕನ್ನಡ ಸಾಹಿತ್ಯಕ್ಕೆ ಒಂದು ಅಪೂರ್ವ ಕೊಡುಗೆ. ಇಲ್ಲೆಲ್ಲ ನಾಟಕಕಾರರು ಒಬ್ಬ ಸಮರ್ಥ ಮನಶಾಸ್ತ್ರಜ್ಞನ ಸೂಕ್ಷ್ಮ ನಿರೀಕ್ಷಣಾ ಪ್ರಜ್ಞೆಯನ್ನು ಪ್ರದರ್ಶಿಸಿದ್ದಾರೆ. ಕ್ರೋಧದ ಆವೇಶ ಒಂದು ಮಿತಿಯನ್ನು ಮೀರಿದರೆ ಉನ್ಮತ್ತಾವಸ್ಥೆಗೆ ಸಲ್ಲುತ್ತದೆಂಬ ವಾದವನ್ನು ಮನೋವಿಜ್ಞಾನಿಗಳೂ ಮನ್ನಿಸುತ್ತಾರೆ. 'ವೀರ್ಯಂ ಮಾನುಷಮ್ ಅದೆಂತಿರ್ದುಂ ಎಂಬುದನ್' ನೋಡುತ್ತಿರೆಂದು ರುದ್ರನಿಗೆ ಸವಾಲಾದ ಆತ ಸಂಭ್ರಾಂತಿಯಿಂದ ವರ್ತಿಸುವ ರೀತಿ ಕಣ್ಣು ಕತ್ತಲೆ ತರಿಸುತ್ತದೆ. ಇಲ್ಲಿ. ಅಶ್ವತ್ಥಾಮನ ವಿರುದ್ಧ ವಿಧಿ ಹೂಡಿದ ಸಂಚಿಗೆ, ಇದೆಲ್ಲವನ್ನೂ ಮೀರಿ ನಿಲ್ಲಬೇಕಾದ ರುದ್ರನೇ ಸೂತ್ರಧಾರನಾಗಿರುವುದೊಂದು ವಿಪರ್ಯಾಸ!

ಪಾಂಡವರನ್ನೇ ಸಂಹರಿಸಿದನೆಂಬ ಆನಂದದ ಪರಾಕಾಷ್ಠೆಯಲ್ಲಿರುವ ಅಶ್ವತ್ಥಾಮ. ಅಶ್ವತ್ಥಾಮನ ಹುಸಿ ಆಶ್ವಾಸನೆಗೆ ಜೋತು ಬಿದ್ದು ಶಿವನನ್ನು ಕರೆದು ಕುಣಿಯುವ ಮೇಳದವರು, ನಿಜಸ್ಥಿತಿಯ ಹಿನ್ನೆಲೆಯಲ್ಲಿ ಭಿನ್ನ ಪರಿಣಾಮಕ್ಕೆ ಕಾರಣರಾಗುತ್ತಾರೆ. 'ದೈವಮನ್ ಲೆಕ್ಕಿಸದ ದೈವಾವತಾರ' ಎಂದು ಅಶ್ವತ್ಥಾಮನು ಛೇಡಿಸುವ ರುದ್ರನ ವ್ಯಂಗ್ಯಧ್ವನಿ ಎಂಥ ಆಸ್ತಿಕನನ್ನೂ ದೈವದ ವಿರುದ್ಧ ಬಂಡೇಳಿಸುವಷ್ಟು ಸಶಕ್ತವಾಗಿದೆ. ತನ್ನೆಲ್ಲ ಸಾಫಲ್ಯವನ್ನೂ 'ತಣಿ ಕೌರವ' ನೆಂದು ದುರ್ಯೋಧನನಿಗೆ ನಿವೇದಿಸುವ ಅಶ್ವತ್ಥಾಮನ ಸ್ವಾಮಿಭಕ್ತಿ, 'ಆ ಸ್ವಾಮಿಗಾನಲ್ತು ಮೊದಲೊಳ್ : ಕರ್ಣನ್' ಎಂಬ ಅರಿವಿನ ಹಿನ್ನೆಲೆಯಲ್ಲಿ ಅವನ ವ್ಯಕ್ತಿತ್ವಕ್ಕೆ ವಿಚಿತ್ರ ಪ್ರಕಾಶ ನೀಡುತ್ತದೆ. 'ಸವಿಯ ಸೆರೆ'ಯನ್ನು ಮನದಣಿಯ ಈಂಡಿದ ಅಶ್ವತ್ಥಾಮನ ಕಲ್ಪನೆ ಅಪೂರ್ವವಾಗಿದೆ. (ಅಶ್ವತ್ಥಾಮನ ಅಂಥ ವಿವಶತೆಯಲ್ಲೂ ಅವನ ಪ್ರಶಂಸೆಯನ್ನು ಸ್ವೀಕರಿಸುವ. ಇತ್ತ ಕೃಷ್ಣನಿಂದಲೂ ಹೊಗಳಿಸಿಕೊಳ್ಳುವ ರುದ್ರನ ಪಾತ್ರವಂತೂ ಅನುಕಂಪಕ್ಕೆ-ಅಸಹ್ಯಕ್ಕೆ ಸಮಾನವಾಗಿ ಗುರಿಯಾಗುತ್ತದೆ!) 'ರಾಜರೊಳ್ ಕೆಳೆತನಂ– ಉಂಟೆ ಇಲ್ಲ' ಎನ್ನುವ ಅಶ್ವತ್ಥಾಮನ ಮಾತಿನ ವ್ಯಂಗ್ಯ. 'ಪುರುಳಾಗು. ಮರುಳಾಗು. ಕಲಿಯಾಗು. ಪೇಡಿಯಾಗಣ್ಣ' ಎನ್ನುವ ಭಾರ್ಗವಿಯ ಅಕಳಂಕ ವಾತ್ಸಲ್ಯ– ಅವಳ ಭಾವ ಪಾರವಶ್ಯ. "ಮಿಕ್ಕೆಲ್ಲ ನಡತೆಯೊಳ್ ಅವನಂತೆ" ಆಗೆಂದು ಮಗ ರುದ್ರಶಕ್ತಿಯನ್ನು ಹರಸುವ ಅಶ್ವತ್ಥಾಮನ ಆತ್ಮಗೌರವ. ತನ್ನ ವ್ಯಥೆ, ಹಗೆಗಳ ಸಂತಸದಿಂದ ಇಮ್ಮಡಿಯಾಗುತ್ತದೆಂದು ತಹತಹಿಸುವ ತೀರಾ ಮಾನವೀಯ ವ್ಯವಹಾರ, "ಮನುಜಂಗೆ ಸ್ನೇಹವೆಂಬುದು ಪುಸಿಯ ನಚ್ಚು" ಎಂಬ ಹತಾಶೆಯ ಅಭಿವ್ಯಕ್ತಿ. ಶ್ರೀಯವರ ಮಾನವೀಯ ತುಡಿತದ ನಿದರ್ಶನಗಳಾಗುವ ಸ್ಥಾನಗಳು.

ಈ ನೆಲದ ಮಣ್ಣಿನಲ್ಲಿ ಆಳದಾಳಕ್ಕೆ ಬಿಟ್ಟ ಬೇರುಗಳನ್ನು ತುಂಡರಿಸಿ ಚೆಲ್ಲಬೇಕಾದಾಗ ಅಶ್ವತ್ಥಾಮನಿಗಾದ ನೋವಿನ ಪದರಗಳಲ್ಲಿ ಅಗೋಚರವಾಗಿ ಅವಿತಿದೆ ಅವನ ಜೀವನ ಪ್ರೀತಿ. "ಎನಗೆ ಜೀವಾನಂದಮಾಗಿರ್ದರೆಲ್ಲರುಂ ಬೀಳ್ಕೊಡಿಂ" ವಿಯೋಗದ ಎಲ್ಲ ವೇದನೆಯನ್ನು ಹಿಡಿದಿಟ್ಟ, ಬದುಕಿನ ಸಾರ ಸರ್ವಸ್ವವನ್ನು ಸೂಚಿಸುವ ಸಾರ್ಥಕ ವಾಕ್ಯ. ಸಾಯುವಾಗಲೂ ಹೋಗುತ್ತೇನೆ ಎನ್ನಲಾರ ಆತ. "ಮರಳಿ ಬರುತ್ತೇನೆ ತಾನು" ಎನ್ನುವ ಸುಪ್ತ ಬಯಕೆಯ ಸೂಚನೆಯಿಂದ ಅವನ ಕೊನೆ ಇನ್ನಷ್ಟು ಹೃದಯ ವೇಧಕವಾಗುತ್ತದೆ. 'ಸತ್ತರೊಳ್ ಪುರುಡಿಸುವ ಶೂರರ್ ಇರ್ಪರ್ ಕೆಲರ್' ಎನ್ನುವ ಏಕಲವ್ಯನ ಮಾತಿನಲ್ಲಿ ಸತ್ಯ ಭವಿಷ್ಯದ ಮುನ್ಸೂಚನೆಯಾಗಿದೆ. ಭೀಮನೊಡನೆ. "ಅಬ್ಬರಿಸಿ ಬಳಿಸದಿರ್ ಅಶ್ವತ್ಥಾಮನನ್" ಎನ್ನುವಾಗಿನ ಅವನ ಸ್ನೇಹದಷ್ಟು ಹೃದಯ ಬಳಲಿ ಮಲಗಿದ ಮಗುವಿನ ವಿಶ್ರಾಂತಿ ಅಬಾಧಿತವಾಗಲೆಂಬ ತಾಯಿಯ ಎಚ್ಚರಿಕೆಯಂತೆ ನಮ್ಮ ಮನಸ್ಸನ್ನು ತೋಯಿಸಿಬಿಡುತ್ತದೆ. ಇಲ್ಲೆಲ್ಲ ಶ್ರೀಯವರ ಅತಿ ಸೂಕ್ಷ್ಮಸ್ತರದಲ್ಲೂ ಪ್ರತಿಕ್ರಿಯಿಸುವ ಸಾಮರ್ಥ್ಯದೊಂದಿಗೆ, ಮನುಷ್ಯನ ನವಿರು ಭಾವನೆಗಳನ್ನು, ಸುಕೋಮಲ ಸಂವೇದನೆಗಳನ್ನು ಗುರುತಿಸುವ ಅವರ ಶಕ್ತಿ ವ್ಯಕ್ತವಾಗಿದೆ. ಇಲ್ಲಿಯ ಆಶಯ ಅದೆಷ್ಟು ಸೊಗಸಾದ ಚಿತ್ರ ಮೂಡಿಸುತ್ತದೆ! ಚೆಲುವಾಗಬಹುದಾಗಿದ್ದ ಬಾಳೊಂದು ದ್ವೇಷದ ವಳ್ಳುರಿಗೆ ಸಿಕ್ಕಿ ಹರಿಹಂಚಾದ ರೀತಿ ಶ್ರೀಯವರನ್ನು ತುಂಬ ಬಾಧಿಸಿರಬೇಕು. ಆದುದರಿಂದಲೇ ಅವರು ಕೃಷ್ಣನ ಬಾಯಿಯಲ್ಲಿ, "ಕೆಳೆಯಂಗೆ ಸೋಲ್ವುದೆ ಜಯಂ, ಕ್ಷಮೆಯು ತಾನ್ ಜಯಂ. ಕ್ರೋಧಮನ್ ತುಳಿದಿಟ್ಟು ಬಿಲ್ವಿಡಿದು ಧರ್ಮಮನ್, ಬಗೆಯೊಡನೆ ಹೋರಾಡುವುದೇ ಜಯಂ" ಎಂದು ಆತ್ಮಶಕ್ತಿಯನ್ನು ರೂಢಿಸಿಕೊಳ್ಳಬೇಕಾದ ಅಗತ್ಯವನ್ನು ಒತ್ತಿ ಹೇಳಿಸುತ್ತಾರೆ.

'ಬದುಕಿನಾಚೆಯ ಬದುಕು' ಎಲ್ಲರಿಗೂ ನಿಗೂಢ. ಆದುದರಿಂದಲೇ ಮೃತ್ಯುವಿನ ಬಗೆಗೆ ಭಯಮಿಶ್ರಿತವಾದ ಆತಂಕ. ಆದಷ್ಟು ಅದನ್ನು, ಅದರ ಯೋಚನೆಯನ್ನು ದೂರ ತಳ್ಳಿಬಿಡುವ ಬಯಕೆ. ಬದುಕಿನ ಒಂದು ಹಂತದಲ್ಲಿ ಕ್ರೂರವಾಗಿ ಕಾಡುವ ಈ ಅನಿಸಿಕೆಗೆ ವರ್ಷಗಳು ಉರುಳಿದಂತೆ ನಾವು ಅನಿವಾರ್ಯವಾಗಿ ಹೊಂದಿಕೊಂಡು ಬಿಡುತ್ತೇವೆ. ಒಂದಲ್ಲ ಒಂದು ದಿನ ನಾವೆಲ್ಲ ಈ ಭಯಾನಕ ಅನುಭವವನ್ನು ತಪ್ಪಿಸಿಕೊಳ್ಳುವಂತಿಲ್ಲ ಎಂಬ ಅರಿವಿನಿಂದ ಮೃತ್ಯುವಿನ ಸಮ್ಮುಖದಲ್ಲಿ ನಾವು ವಿನಮ್ರರಾಗುತ್ತೇವೆ: ಬದುಕಿನ ಎಲ್ಲ ದ್ವೇಷಗಳು ಅಲ್ಲಿ ಲಯವಾಗುತ್ತವೆ. "ನಾನುಂ ಇಂತಾಗೆನೇ ಒಂದು ದಿನಂ" ಎನ್ನುವ ಕೃಷ್ಣನ ಮಾತಿನ ಅಂತರ್ಯದಲ್ಲಿ ಶ್ರೀಯವರು ಅಗಾಧ ಅರ್ಥವನ್ನು ಬಿತ್ತರಿಸಿದ್ದಾರೆ.

ಕೊನೆಯ ಭಾಗ ಅಶ್ವತ್ಥಾಮನ ಶವ ಸಂಸ್ಕಾರದ ಪ್ರಸಂಗದಲ್ಲಿ ಕೃಷ್ಣನ ನಡತೆ ಆದರ್ಶವಾಗಿದೆ : ಧೀರೋದಾತ್ತವಾಗಿದೆ. "ಕಲಿ ಸಾವೆ ಪೊಗಲ್ವುದು ಶೀಲಂ–ನೋಯಿಸುವುದಲ್ತು" ಎನ್ನುವ ಕೃಷ್ಣನ ಔದಾರ್ಯವನ್ನೂ ಗುಣಗ್ರಾಹಿತ್ವವನ್ನೂ ಮುಕ್ತವಾಗಿ ಪ್ರಶಂಸಿಸುತ್ತಾನಾದರೂ, ಅಳಿದ ಗೆಳೆಯನ ಜೀವಂತ ಭಾವನೆಗೆ ಒಂದಿಷ್ಟೂ ಘಾಸಿಯಾಗದಂತೆ ರಕ್ಷಿಸಿಡುವ ಹೊಣೆಯಿಂದ ತಪ್ಪಿಸಿಕೊಳ್ಳಲಾರ. "ಪ್ರಿಯಮೊ ಅಪ್ರಿಯಮೊ ಕೆಳೆಯಂಗೆ ಅರಿಯನ್ ಆನ್" ಎನ್ನುವ ಅತ್ಯಂತ ಸೂಕ್ಷ್ಮವಾಗಿ ಸ್ಪಂದಿಸುವ ಏಕಲವ್ಯನ ವ್ಯಕ್ತಿತ್ವ ಎಲ್ಲೂ ಸಮತೋಲನವನ್ನು ಕಳೆದುಕೊಳ್ಳದೆ, ನಾಟಕದ ಪರಿಣಾಮಕ್ಕಾಗಿ ಅತ್ಯಂತ ಸಮರ್ಪಕವಾಗಿ ದುಡಿಯುವ ರೀತಿ ಮನೋಜ್ಞವಾದುದು. ಇಂಥ ದಿವ್ಯಸ್ನೇಹದ ಸನ್ನಿಧಿಯಲ್ಲಿ, ನೀನೇ ಧನ್ಯ ಅಶ್ವತ್ಥಾಮ ; ನಿನ್ನ ಬದುಕಿನ ಬವಣೆಗೆ ಸಂದ ಪರಿಹಾರವೇ ಇಂಥ ಅಕುಟಿಲ ಸ್ನೇಹಲಾಭ !

ಅಶ್ವತ್ಥಾಮ ತನ್ನ ಬಳಗದ ಅಭಿಮಾನದ ಕೂಸು, ಹೆಮ್ಮೆಯ 'ಬಾಳಿ ಸೂರ್ಯ' ಆತ ಸಾಯುವ ಮೊದಲಿನ ದೀರ್ಘ ಸ್ವಗತ, ತನ್ನ ಬಾಳು ಸಾಗಿ ಬಂದ ದಾರಿಯ ಸಿಂಹಾವಲೋಕನ, "ತಕ್ಕವನ್ ತಕ್ಕವೊಲ್ ಬಾಳ್ದಪನ್, ತಕ್ಕವೊಲ್ ಸತ್ತಪನ್" ಎನ್ನುವ ಅಚ್ಚಳಿಯದ ಅಭಿಮಾನ, ಭಾರ್ಗವಿಯ ನಿಡುಬಾಳಿನ ಕಷ್ಟನಿಷ್ಠುರಗಳ ಹೃದಯಂಗಮ ನಿರೂಪಣೆ, ಏಕಲವ್ಯನ ನಿಷ್ಕಳಂಕ ಸ್ನೇಹದ ಅಭಿವ್ಯಕ್ತಿ ನಾಟಕದ ಮೌಲ್ಯವನ್ನು ಹೆಚ್ಚಿಸಿದ ಅಂಶಗಳು.

ಈ ನಾಟಕದ ಹೆಚ್ಚಿನ ಪಾತ್ರಗಳ ಅಂತರಂಗವೂ ನೋವಿನ ಕಡಲೇ ಆಗಿದೆ, ಅದರ ಬರತ–ಇಳಿತಗಳು, ವೈವಿಧ್ಯಪೂರ್ಣ ವೇದನೆಯ ಅಭಿವ್ಯಕ್ತಿಯ ಸುತ್ತವೇ ನಾಟಕದ ಪರಿಭ್ರಮಣ ! ಆದರೆ ಶ್ರೀಯವರ ಸಹಜ ಜೀವನೋತ್ಸಾಹ ಈ ಎಲ್ಲ ಜಂಜಡದ ನಡುವೆಯೂ ಹಚ್ಚ ಹಸಿರನ್ನು ಕಳೆದುಕೊಳ್ಳದಿರುವುದು ಅಚ್ಚರಿ ಹುಟ್ಟಿಸು

ತ್ತದೆ. 'ಕೊರೆಪಲ್ಲ ಕುಳಿರ ಹೇಮಂತನ್ ಪೊಳ್ತು ಬರೆ ಮುಪ್ಪಾಗಿ ಎಳೆಚಿಗುರ ಚೈತ್ರಂಗೆ ಬಳಿವಿಟ್ಟು ಪೋಕುಂ' ಎನ್ನುವ ಆಶಾವಾದ ಆ ನಿರಂತರ ವೇದನೆಯ ಬೆಂಗಾವಲಿಗೆ ಇರುತ್ತದೆ : ಅದನ್ನು ಸಹ್ಯವಾಗಿಸುತ್ತದೆ.

ಈ ನೆಲದ ಮಣ್ಣಿನೊಡನೆ ತನಗಿರುವ ಗಾಢವಾದ ಸಂಬಂಧವನ್ನು ವರ್ಣಿಸುವ ಅಶ್ವತ್ಥಾಮನ ಮಾತುಗಳು ಅವನೊಳಗಿನ ವೇದನೆಯನ್ನು ಮೈತುಂಬ ಹೊದ್ದು ಕೊಂಡಿವೆ. ಮುಂದುವರೆಯುತ್ತಾ ಆತ ಹೇಳುವ "ಇಂತಪ್ಪನ್ ಇಲ್ಲವೆಂದಾಗಿರ್ದೇನ್, ಈಗಳೋ, ಇಂತಪ್ಪನ್ ಇಲ್ಲವೆಂದೇ ಆದೆನ್–ಪುಡಿಯೊಳಗೆ ಪುಡಿಯು ಪುಡಿಯಾದೆನ್' ಆತನ ಒಳತೋಟಿಯು, ಆತ್ಮಗ್ಲಾನಿಯ ಸಂಪರ್ಕಕ್ಕೆ ನಮ್ಮನ್ನು ಒಯ್ಯುತ್ತವೆ. ಈ ನೋವಿನ ಪರಿಧಿಯಾಚೆಗೆ ಆತನಿಗೆ ಬದುಕಿಲ್ಲ ; ಆದ್ದರಿಂದಲೇ ಸಾವು ಅವನಿಗೆ ಆಪ್ತ. ತನ್ನ ನಿರರ್ಥಕ ಬದುಕಿನ ವ್ಯರ್ಥ ಯಾತನೆಯಲ್ಲಿ ದಹಿಸುತ್ತಿರುವ ಆತನೊಳಗಿನ ಬೆಂಕಿಯ ಝಳ ನಮಗೂ ತಾಗುವಷ್ಟು ಚುರುಕಾಗಿದೆ. ಪ್ರತಿ ಸ್ಪಂದನಕ್ಕೆ ಕಾಯುವ ಅವನ ತೀವ್ರ ವೇದನೆಯ ಕ್ಷಣಗಳು ಆ ನೋವಿಗೆ ಸಾರ್ವತ್ರಿಕತೆಯನ್ನು ಕೊಡುವಷ್ಟು ಶಕ್ತಿಯುತವಾಗಿವೆ. ಅವನೇ ವ್ಯಾಖ್ಯಾನಿಸುವಂತೆ, ಸಾವು "ಸಂಕಟಂ ಕಳೆದು ಬಿಡುಗಡೆ"ಯ ಒಸಗೆಯನ್ನು ತಂದ ಬಂಧುವಾಗಿದೆ. ಆದುದರಿಂದಲೇ ನಾವೂ ಅವನ ಸಾವಿನ ವರ್ತಮಾನವನ್ನು ಪ್ರಿಯವಾರ್ತೆಯಂತೆ ಸ್ವಾಗತಿಸುತ್ತೇವೆ. ಈ ಕಿತ್ತು ತಿನ್ನುವ ಪಾಪಪ್ರಜ್ಞೆಯಿಂದ, ನೆರಳಾಗಿ ಕಾಡುವ ವೈಫಲ್ಯದ ತಿವಿತದಿಂದ ಪಾರಾದನಲ್ಲ–ಮುಕ್ತನಾದನಲ್ಲ–ಎಂದು ನೆಮ್ಮದಿಯ ಉಸುರ್ಗರೆಯುತ್ತೇವೆ. ಇದು ಮೇಲ್ನೋಟಕ್ಕೆ ವಿರೋಧಾಭಾಸವೆನಿಸಿದರೂ ವಸ್ತು ಸ್ಥಿತಿಯಾಗಿದೆ.

'ಜಾಕಲ್ ಇನ್ ಅರ್ಜುನಸ್ಕಿನ್' ಎಂದು ಅಂತಿಮವಾಗಿ ತೀರ್ಮಾನಿಸುವಾಗ, ಸಮರ್ಥ ನ್ಯಾಯಾಧೀಶನ ನಿಷ್ಠುರ ನ್ಯಾಯ ಪ್ರಜ್ಞೆ ಅಶ್ವತ್ಥಾಮನ ವ್ಯಕ್ತಿಯನ್ನು ನಿಚ್ಚಳವಾಗಿರಿಸಿದೆ, ಕವಿದಿದ್ದ ಕಾವಳವನ್ನು ತೊಲಗಿಸಿ ಬೆಳಕನ್ನು ಕರುಣಿಸಿದೆ. ಆ ಹೊಸ ಕಾಣ್ಕೆಯಲ್ಲಿ ಅವನು ಮೃತ್ಯುವನ್ನು ಅಂಗೀಕರಿಸಿ ಬಿಡುತ್ತಾನೆ!

ಆದಿ ಕವಿ ಪಂಪನ ಪ್ರಭಾವ ವಲಯಕ್ಕೆ ಅವನ ಅನಂತರದ ಕವಿಗಳು ಒಂದಲ್ಲ ಒಂದು ರೀತಿಯಲ್ಲಿ ಒಳಗಾಗುತ್ತಾರೆಂಬ ಮಾತಿಗೆ ಶ್ರೀಯವರೂ ಅಪವಾದವಾಗಿಲ್ಲ. ಬನವಾಸಿಯನ್ನು ಮತ್ತೆ ಮತ್ತೆ ಹೊಗಳಿ ಹಾಡುವ ತನ್ನ ಬಾಳ್ವೆಯ ಬಳ್ಳಿಯ ತಾಯಿ ಬೇರನ್ನು ಹೊತ್ತಿರುವ ನೆಲಕ್ಕೆ ಸುಖ ಸಮೃದ್ಧಿಯನ್ನು ಹಾರೈಸುವ ಮೇಳದವರ ಮಾತುಗಳಲ್ಲಿ ನಾವು ಪಂಪನ ಪಡಿನೆಳಲನ್ನು ಕಾಣುತ್ತೇವೆ. ಹಾಗೆಯೇ ನಾಟಕದ ಅಂತಿಮ ಭಾಗದ ರುದ್ರನ ಪೂಜಾವಸರದ ಚಿತ್ರಣದಲ್ಲಿ ಹರಿಹರನ ಗುಂಡಯ್ಯನ ರಗಳೆಯ ದಟ್ಟಛಾಯೆಯನ್ನು ನಾವು ಗುರುತಿಸಬಹುದು.

ಹಲವು ಸಂದರ್ಭಗಳಲ್ಲಿ, ನಾಟಕದ ಒಟ್ಟು ಪರಿಣಾಮಕ್ಕಾಗಿ ದುಡಿಯುವ ಮೇಳಗಳ ಬಗೆಗೆ ಉಲ್ಲೇಖಿಸದಿದ್ದರೆ ಅಪಚಾರವಾದೀತು. ಇಲ್ಲಿ ಮೇಳ ಅಪರಿಚಿತ ಗಾಯಕರ ತಂಡವಲ್ಲ, ಅದಕ್ಕೆ ರಂಗದ ಪಾತ್ರಗಳೊಡನೆ ನಿಕಟ ಸಂಬಂಧವಿದೆ; ಅದು ಪಾತ್ರಗಳೊಡನೆ ನೇರವಾಗಿ ಸಂಭಾಷಿಸುತ್ತದೆ, ನಾಟಕದ ಬೆಳವಣಿಗೆಯಲ್ಲಿ ಸಕ್ರಿಯ ಪಾತ್ರವಹಿಸುತ್ತದೆ; ರಂಗದ ಆಗುಹೋಗುಗಳಲ್ಲಿ ಅದಕ್ಕೆ ತೀವ್ರ ಆಸಕ್ತಿಯಿದೆ. ಅದು ಇತರ ಪಾತ್ರಗಳ ಅದರಲ್ಲೂ ಅಶ್ವತ್ಥಾಮನ ನೋವಿಗೆ ಸ್ಪಂದಿಸುವ ರೀತಿಯಲ್ಲಿ ಅದರ ಸಾರ್ಥಕ ಅಡಗಿದೆ. ಈ ನೇರ ಸಂಬಂಧ ಸ್ಥಾಪನೆಯಿಂದ ಶ್ರೀಯವರು ಅದ್ಭುತ ಪರಿಣಾಮ ರಮಣೀಯತೆಯನ್ನು ಸಾಧಿಸಿಕೊಂಡಿದ್ದಾರೆ. ಗಾಢತತ್ವಗಳನ್ನೂ ಸರಳಗೊಳಿಸುವ ಅದರ ಪ್ರಾಮಾಣಿಕ ಪ್ರಯತ್ನವೇ ಅದನ್ನು ನಮಗೆ ಆತ್ಮೀಯವಾಗಿಸುತ್ತದೆ.

ಇದುವರೆಗಿನ ಚರ್ಚೆಯನ್ನು ಕ್ರೋಡೀಕರಿಸಿ ಹೇಳುವುದಾದರೆ ಕನ್ನಡದ ನಾಟಕ ಸಂದರ್ಭಕ್ಕೆ ಬೆಲೆಯುಳ್ಳ ಕೊಡುಗೆ 'ಅಶ್ವತ್ಥಾಮನ್'. ಈಗಾಗಲೇ ಗಮನಿಸಿದ ಅದರ ಕೆಲವು ಅಂತರ್–ವಿರೋಧಿ ಅಂಶಗಳು ಮತ್ತು ಗಕ್ಕನೆ ಯಾವುದೋ ಅಪರಿಚಿತ ಭಾವನೆ ಉಂಟುಮಾಡುವ ಹಳಗನ್ನಡದ ಬಿಗುವಿನ ಭಾಷೆ (ಈ ಕೃತಿ ಈ ಶತಮಾನದ ಮೂರನೆಯ ದಶಕದ್ದಾದರೂ ಕೂಡಾ ಭಾಷೆಯಲ್ಲಿ ಈ ಹಳತನ ಏಕೆ ಉಳಿಯಿತೋ ?) ದೈವಿಕತೆಯ ಪಾರಮ್ಯದ ಪ್ರತಿಷ್ಠಾಪನೆ (ಈ ದೈವಿಕತೆ ಕಲಾತ್ಮಕವಾಗಿ ಅರಳಿಕೊಳ್ಳದೇ ಕೊಂಚ ಮಟ್ಟಿನ ಕೃತಕತೆಯ ಪರಿಣಾಮ ತೊಡುವುದಿಲ್ಲವೆ ?) ಇವೆಲ್ಲ ಈ ನಾಟಕದ ಕೆಲವು ಮಿತಿಗಳು. 'ಅಕಾಡಮಿಕ್' ಎನಿಸಬಹುದಾದರೂ ಈ ಮಾತುಗಳನ್ನು ಸ್ಪಷ್ಟ ಪಡಿಸಿಕೊಂಡೇ ನಾಟಕದ ಎತ್ತರಕ್ಕೆ ನಮ್ಮ ಶುಭಾಶಯದ ಗುಡಿ ಹಾರಿಸಬಹುದು.

*

# ಪಾರಸಿಕರು

ಓ. ಎಲ್. ನಾಗಭೂಷಣ ಸ್ವಾಮಿ

ಬಿ. ಎಂ. ಶ್ರೀಯವರ ಮೂರು ನಾಟಕಗಳ ಭಾಷಾಂತರ ಸಾಹಿತ್ಯದ ಮೂರು ಮುಖ್ಯ ಪ್ರಕಾರಗಳಿಗೆ ಸೇರಿದವು. 1926 ರಲ್ಲಿ ಬಂದ 'ಗದಾಯುದ್ಧ ನಾಟಕಂ" ಒಂದು "ರೂಪಾಂತರ"–ರನ್ನನ ಹಳಗನ್ನಡ ಚಂಪೂ "ರೂಪ"ದ ಕೃತಿ ಇಲ್ಲಿ ನಾಟಕದ "ರೂಪ" ತಾಳಿದೆ. ವಸ್ತುವೂ ಸಂಸ್ಕೃತಿಯೂ ಕನ್ನಡದ್ದೇ, ಆದರೆ ರೂಪ ಮಾತ್ರ ಹೊಸದು. ಲಭ್ಯ ವಸ್ತುವನ್ನು ಬಳಸಿಕೊಂಡು ನಾಟಕ ಸಾಹಿತ್ಯವನ್ನು ಸೃಷ್ಟಿಸಲು ಬೇಕಾಗುವ ಹೊಸ ತಂತ್ರವನ್ನು ಈ ನಾಟಕ ಕನ್ನಡಕ್ಕೆ ಪರಿಚಯಿಸಿತು. 1929 ರಲ್ಲಿ ಬಂದ "ಅಶ್ವತ್ಥಾಮನ್" ಸೊಫೊಕ್ಲಿಸನ "ಏಜಾಕ್ಸ್" ನಾಟಕದ "ಅನುವಾದ"-ಬೇರೆಯ ಭಾಷೆ-ಸಂಸ್ಕೃತಿಯ ಕೃತಿಯೊಂದನ್ನು ಅನು-ಸರಿಸಿ, ಅದರ ಸತ್ಯಕ್ಕೆ ಸಮಾನಾಂತರವಾದ ಭಾಷೆ ಮತ್ತು ಸಾಂಸ್ಕೃತಿಕ ದೃಷ್ಟಿಗಳನ್ನು ಕನ್ನಡಕ್ಕೆ ಕೊಡುವ ಯತ್ನ. ಪರಕೀಯ ಸಂಸ್ಕೃತಿಯ ಬದುಕಿನ ದೃಷ್ಟಿಕೋನದ ಅರಿವನ್ನೂ ಬಳಸಿಕೊಂಡು ಹೇಗೆ ನಮ್ಮ ಪುರಾಣ ಇತಿಹಾಸಗಳನ್ನು ಹೊಸ ಕಲಾಕೃತಿಯ ನಿರ್ಮಾಣಕ್ಕೆ ಮೂಲ ಸಾಮಗ್ರಿಗಳನ್ನಾಗಿ ಪರಿವರ್ತಿಸಿಕೊಳ್ಳಬಹುದೆಂಬ 'ಹೊಸ' ದೃಷ್ಟಿಯನ್ನು ಈ ನಾಟಕ ಪರಿಚಯಿಸಿತು.

ಈ 'ಹೊಸ' ದೃಷ್ಟಿ ಉಂಟು ಮಾಡಿದ ಆಘಾತದಿಂದಲೇ "ಅಶ್ವತ್ಥಾಮನ್" ಬಗ್ಗೆ, ಶ್ರೀಯವರ ಉಳಿದ ಯಾವುದೇ ನಾಟಕಗಳಿಗಿಂತ, ಅಗಾಧ ಪ್ರಮಾಣದ ಉದ್ವೇಗ ತುಂಬಿದ ಚರ್ಚೆ ನಡೆಯಿತು. 1935ರಲ್ಲಿ ಬಂದ "ಪಾರಸಿಕರು" ಈಸ್ಕಿಲಸನ "ಪರ್ಸಿಯನ್ಸ್" ನಾಟಕದ "ಭಾಷಾ-ಅಂತರ". ಇದರ ಭಾಷೆ ಕನ್ನಡವಾದರೂ ವಸ್ತು ಮತ್ತು ಧೋರಣೆಗಳ ಗ್ರೀಕ್‌ತನ ಹಾಗೇ ಉಳಿದಿದೆ. "ಪಾರಸಿಕರು" ತನ್ನ ಮೂಲ ಪೌರತ್ವವನ್ನು ಹಾಗೇ ಉಳಿಸಿಕೊಂಡಿರುವ ಸಾಂಸ್ಕೃತಿಕ ರಾಯಭಾರಿ. ಪ್ರಪಂಚದ ಹಳೆಯ ಸಂಸ್ಕೃತಿ-ರಂಗಭೂಮಿಯ ಪ್ರಾಚೀನ ನಾಟಕಕಾರನ, ಅವನ ನಾಟಕ ತಂತ್ರಗಳ ಪರಿಚಯ ಮಾಡಿಕೊಡುತ್ತದೆ. "ಪಾರಸಿಕರು" ಹೆಚ್ಚು ಚರ್ಚೆಗೆ ಒಳಗಾಗದಿರುವುದಕ್ಕೆ ಇದೂ ಒಂದು ಕಾರಣವಿರಬಹುದು. ತನ್ನ ಭಾಷಾ ಅಂತರ ಲಕ್ಷಣದಿಂದ ಮತ್ತು ವಸ್ತುವಿನ ಅಪರಿಚಿತತೆಯಿಂದ ಈ ನಾಟಕ ಉಳಿದೆರಡು ಕೃತಿಗಳಂತೆ ಸಹೃದಯರನ್ನು ಗಾಢವಾಗಿ ಕಲಕುವುದಿಲ್ಲ. ಆದರೆ, ಕನ್ನಡ ನಾಟಕವನ್ನು ಕುರಿತು ಅಧ್ಯಯನ ಮಾಡುವಾಗ, ಗ್ರೀಕ್ ನಾಟಕದಿಂದ ಕನ್ನಡ ನಾಟಕ ಏನೇನನ್ನು ಪಡೆಯಿತು ಎಂದು ವಿವೇಚಿಸುವಾಗ, ಮತ್ತು ಭಾಷಾಂತರ ಎಂಬ ವಿಷಯವನ್ನೇ ಕುರಿತು ತಾತ್ವಿಕವಾಗಿ ಯೋಚಿಸುವಾಗ "ಪಾರಸಿಕರು" ಮುಖ್ಯವಾದದ್ದಾಗುತ್ತದೆ.

"ಪರ್ಸಿಯನ್ಸ್" ಈಸ್ಕಿಲಸನ ಅತ್ಯುತ್ತಮ ನಾಟಕವಲ್ಲ. ಈಸ್ಕಿಲಸ್ ತೊಂಬತ್ತು ನಾಟಕಗಳನ್ನು ಬರೆದಿದ್ದನಂತೆ. ಈಗ ಸಿಕ್ಕಿರುವುದು ಏಳು ಮಾತ್ರ. ಇವು ಏಳೂ ಗ್ರೀಕ್ ರಂಗಭೂಮಿ ಶೈಶವ ಸ್ಥಿತಿಯಿಂದ ಪ್ರಬುದ್ಧ ಸ್ಥಿತಿಗೆ ಬೆಳೆದ ರೀತಿಯನ್ನು, ನಾಟಕ ಕಲೆಯ ಬೆಳವಣಿಗೆಗೆ ಈಸ್ಕಿಲಸ್ ಕೊಟ್ಟ ಕಾಣಿಕೆಗಳನ್ನೂ ಮನವರಿಕೆ ಮಾಡಿಕೊಡುತ್ತವೆ. (ಗ್ರೀಕ್ ಗಂಭೀರ ನಾಟಕವು ನಮಗೆ ಈಗ ಪರಿಚಿತವಾಗಿರುವ ಸ್ವರೂಪವನ್ನು ಪಡೆದದ್ದೇ ಈಸ್ಕಿಲಸನಿಂದಾಗಿ) "ಅಗಮೆಮ್ನಾನ್" ಈಸ್ಕಿಲಸನ ಅತ್ಯುತ್ತಮ ಕೃತಿಯಾದರೂ "ಪರ್ಸಿಯನ್ಸ್"ಗೆ ಪ್ರಾಮುಖ್ಯ ಬಂದಿರುವುದು ಈ ನಾಲ್ಕು ಕಾರಣಗಳಿಗಾಗಿ : 1) ಅದು ಸಮಕಾಲೀನ ಐತಿಹಾಸಿಕ ಘಟನೆಯನ್ನು ಆಧರಿಸಿ ರಚಿತವಾದ ನಾಟಕಗಳ ಪೈಕಿ (ನಮಗೆ ಸಿಕ್ಕಿರುವುದರಲ್ಲಿ) ಮೊದಲನೆಯದು. 2) ಅದರ ಶೈಲಿ ಮತ್ತು ಕಾವ್ಯಗುಣ. 3) ಅದು ಗ್ರೀಕ್ ನಾಟಕ ತಂತ್ರ ಮತ್ತು ಈಸ್ಕಿಲಸನ ನಾಟಕ ತಂತ್ರಗಳ ಬೆಳವಣಿಗೆಯಲ್ಲಿ ಮುಖ್ಯ ಘಟ್ಟವನ್ನು ಸೂಚಿಸುತ್ತದೆ. 4) ಅದು ವ್ಯಕ್ತಪಡಿಸುವ ಗ್ರೀಕ್ ತಾತ್ವಿಕ ದೃಷ್ಟಿ.

"ಪರ್ಸಿಯನ್ಸ್" ಮೊಟ್ಟ ಮೊದಲು ರಂಗಭೂಮಿಯ ಮೇಲೆ ಪ್ರದರ್ಶಿತವಾದದ್ದು ಕ್ರಿ. ಪೂ. 472 ರಲ್ಲಿ. ಕೇವಲ ಎಂಟು ವರ್ಷಗಳ ಹಿಂದಷ್ಟೆ ಸಲಾಮಿಸ್ ಎಂಬಲ್ಲಿ ನಡೆದ ಯುದ್ಧದಲ್ಲಿ ಗ್ರೀಕರು ಪರ್ಶಿಯನ್ ಸೈನ್ಯವನ್ನು ಸೋಲಿಸಿ ಸದೆಬಡಿದಿದ್ದರು. ಪರ್ಶಿಯನರ ಸೋಲು (ಮತ್ತು ಅದರಿಂದ ಗ್ರೀಕರು ಕಲಿಯಬೇಕಾದ ಪಾಠ) ಈಸ್ಕಿಲಸ್‌ನ ನಾಟಕದ ವಸ್ತು. ಈಸ್ಕಿಲಸ್ ಕೂಡ ಸಲಾಮಿಸ್ ಯುದ್ಧದಲ್ಲಿ ಅಥೆನ್ಸಿನ ಸೈನಿಕನಾಗಿ ಪಾಲ್ಗೊಂಡಿದ್ದ. ಪರ್ಶಿಯನ್ನರು ಗ್ರೀಕರ ಮೇಲೆ ಒಟ್ಟು ಮೂರು ಬಾರಿ ದಾಳಿ ಮಾಡಿದರು. ಮೊದಲೆರಡು ಬಾರಿ 'ಡೇರಿಯಸ್ (ನಾಟಕದ ದರ್ಯವೃಷ) ಚಕ್ರವರ್ತಿ ದಾಳಿಯ ನೇತೃತ್ವ ವಹಿಸಿದ್ದ. ಮೂರನೆಯ ಬಾರಿ, ಸಲಾಮಿಸ್‌ನ ನಿರ್ಣಾಯಕ ಯುದ್ಧದಲ್ಲಿ ಕ್ಷಯಾರ್ಷ ಮುಖಂಡನಾಗಿದ್ದ. (ಅದರ ಹಿಂದಿನ ಮರಥಾನ್ ಯುದ್ಧದಲ್ಲೂ ಪರ್ಶಿಯನರು ಸೋತಿದ್ದರು. ಅದರಲ್ಲೂ ಈಸ್ಕಿಲಸ್ ಭಾಗವಹಿಸಿದ್ದ) ಈಗ ಚಾರಿತ್ರಿಕ ದೃಷ್ಟಿಕೋನದಲ್ಲಿ, ಮರಥಾನ್ ಮತ್ತು ಸಲಾಮಿಸ್ ಯುದ್ಧಗಳು ಪೂರ್ವ–ಪಶ್ಚಿಮ ನಾಗರಿಕತೆಗಳ ಸಂಘರ್ಷವಾಗಿ, ರಾಜತ್ವ–ಪ್ರಜಾಪ್ರಭುತ್ವ ಸಂಸ್ಕೃತಿಗಳ ಸಂಘರ್ಷವಾಗಿ, ನಮಗೆ ಕಾಣುತ್ತದೆ. ಪರ್ಶಿಯನ್ ದಾಳಿಯನ್ನು ಹಿಮ್ಮೆಟ್ಟಿಸಿದ ಅಥೆನ್ಸ್ ನಂತರದಲ್ಲಿ ಹೆಲನಿಕ್ ನಾಗರೀಕತೆಯ ಕೇಂದ್ರವಾಗಿ ಬೆಳೆದದ್ದು ಇತಿಹಾಸ. ಪಾಶ್ಚಾತ್ಯ ನಾಗರಿಕತೆ–ಸಂಸ್ಕೃತಿಗಳ ನಿಜವಾದ ಆರ್ಜನ. ಸಂಧಿಕಾಲದಲ್ಲಿ ಬದುಕಿದ್ದ ಈಸ್ಕಿಲಸ್, ಸಲಾಮಿಸ್ ಯುದ್ಧವನ್ನೇ ಮೂಲಸಾಮಗ್ರಿಯಾಗಿ ಬಳಸಿಕೊಂಡು "ಪರ್ಸಿಯನ್ಸ್" ರಚಿಸಿದ.

ಸಮಕಾಲೀನ ಸಂಗತಿಯನ್ನೇ ಗಂಭೀರ ನಾಟಕದ ವಸ್ತುವಾಗಿ ತೆಗೆದುಕೊಂಡಾಗ ಬರುವ ಸಮಸ್ಯೆಗಳು ಈಸ್ಕಿಲಸನಿಗೂ ಎದುರಾಗಿವೆ. ಯುದ್ಧದ ದಿಗ್ವಿಜಯವನ್ನು ಆಚರಿಸುವ ಸಂಭ್ರಮಕ್ಕೆಂದು ಬರೆದ ನಾಟಕ, ಆತನ ದೃಷ್ಟಿಯಲ್ಲಿ, ಮನುಷ್ಯನ ಮಿತಿಗಳನ್ನು ಸೂಚಿಸುವ ಗಂಭೀರ ನಾಟಕವಾಗಬೇಕಿತ್ತು. ಈಸ್ಕಿಲಸ್ ಅಳವಡಿಸಿಕೊಂಡ ನಾಟಕ ತಂತ್ರಗಳು ಇಂದು ನಮಗೆ ತುಂಬಾ ಸರಳವಾಗಿ ಕಾಣುತ್ತವೆ. ಆದರೆ ಧಾರ್ಮಿಕ ಆಚರಣೆಯ ಸಮೂಹ ಕ್ರಿಯೆಯಾಗಿದ್ದ ಒಂದು ಚಟುವಟಿಕೆ ಲೌಕಿಕ

ನಾಟಕ ಕಲೆಯಾಗಲು ತೊಡಗಿದ್ದ ಈಸ್ಕಿಲಸನ ಕೃತಿಗಳಿಂದ ಎಂಬುದನ್ನು ಗಮನಿಸಿದಾಗ ಅವನ ನಾಟಕ ತಂತ್ರದ ಐತಿಹಾಸಿಕ ಮಹತ್ವ ಅರಿವಾಗುತ್ತದೆ. ಮೊದಲನೆಯದಾಗಿ, ಕಾಲದ ದೃಷ್ಟಿಯಿಂದ ಸಮೀಪದ್ದಾದ ಕತೆಯನ್ನು ಈಸ್ಕಿಲಸ್ 'ದೇಶ'ದ ದೃಷ್ಟಿಯಿಂದ ದೂರದಲ್ಲಿರಿಸಿ ನೋಡುತ್ತಾನೆ. ಹೀಗಾಗಿ ಗ್ರೀಕರ ಗೆಲುವನ್ನು ಆಚರಿಸುವ ನಾಟಕ ಹೇಗೆ ಸಂಭ್ರಮವನ್ನು ಮೀರಿದ ಗಂಭೀರತೆಯನ್ನು ಪಡೆಯುತ್ತದೆಂಬುದನ್ನು ಗಮನಿಸಿ. ಕತೆ ನಡೆಯುವುದು ದೂರದ ಪರ್ಷಿಯದಲ್ಲಿ. ಈ ದೂರದಿಂದ ಕೊನೆಯ ಪಕ್ಷ ನಾಲ್ಕು ಲಾಭಗಳಾಗಿವೆ. 1) ಗಂಭೀರ ನಾಟಕಕ್ಕೆ ಅಗತ್ಯವಾದ ನಿರ್ಲಿಪ್ತತೆಯನ್ನು ಸಾಧಿಸುವುದು. ಗ್ರೀಕರ ದೃಷ್ಟಿಯಿಂದ ಕತೆಯನ್ನು ಹೇಳಿದ್ದರೆ ಗೆಲುವಿನ ಸಂಭ್ರಮವಷ್ಟೆ ಆಗುತ್ತಿತ್ತು. ಸೋತ ಪರ್ಷಿಯನರ ದೃಷ್ಟಿಕೋನವನ್ನು ಆರಿಸಿಕೊಂಡದ್ದು ಮನುಷ್ಯನ ಅಹಂಕಾರ–ಪತನಗಳನ್ನು ಸೂಚಿಸಲು, ತನ್ನ ನಾಡಿನ ಗ್ರೀಕರಿಗೂ ಮನುಷ್ಯನ ಮಿತಿಯನ್ನು ಬೋಧಿಸಲು ಸಹಾಯ ಮಾಡುತ್ತದೆ. ಗೆದ್ದವರ ಸಂಭ್ರಮಕ್ಕಿಂತ ಸೋತವರ ಪಾಡು ದುರಂತದ ಅಭಿವ್ಯಕ್ತಿಗೆ ಸಹಾಯಕವಾಗುವಂಥದು. 2) ಪೂರ್ವ ದೇಶದ ಚಕ್ರವರ್ತಿಯ ರಾಜಧಾನಿಯಲ್ಲಿ ಕತೆ ನಡೆವುದರಿಂದ, ರಂಗದ ಮೇಲೆ ದೃಶ್ಯ ವೈಭವವನ್ನು ನಿರ್ಮಿಸುವುದಕ್ಕೆ ಅವಕಾಶ ದೊರೆಯುತ್ತದೆ. ದೃಶ್ಯ ವೈಭವ ಬಾಹ್ಯಕ್ರಿಯೆಯ ಅಭಾವವನ್ನು ತುಂಬಲು ಸ್ವಲ್ಪ ಮಟ್ಟಿಗೆ ಸಹಾಯ ಮಾಡುತ್ತದೆ. 3) ಪರ್ಷಿಯನ್ ಸಾಮ್ರಾಜ್ಯ ಮತ್ತು ಕ್ಷಯಾರ್ಷನ ಅವನತಿಗೆ ಈ ದೃಶ್ಯ ವೈಭವ ಅದ್ಭುತ ವೈದೃಶ್ಯವನ್ನು ಒದಗಿಸುತ್ತವೆ. 4) ಮನುಷ್ಯನ ಬದುಕು, ಮನುಷ್ಯ ದೇವರ ಸಂಬಂಧ, ಬದುಕಿನಲ್ಲಿ ವಿಧಿಯ ಕೈವಾಡ ಈ ಮುಂತಾದ, ಈಸ್ಕಿಲಸನ ತಾತ್ವಿಕ ವಿಚಾರಗಳನ್ನು ಮಂಡಿಸಲು ಖಚಿತವಾದ, ಮೂರ್ತವಾದ ಹಿನ್ನೆಲೆಯನ್ನು ಒದಗಿಸುತ್ತದೆ.

ಈಸ್ಕಿಲಸನ ನಾಟಕ ತಂತ್ರ ಸರಳವಾದದ್ದು. ಸರಳವಾದ ರಂಗಭೂಮಿಗೆ ಬರೆದ ನಾಟಕ ಇದು ಎಂಬುದನ್ನು ಮರೆಯಬಾರದು. ಘಟನೆಗಳು, ಸಂಘರ್ಷ, ಶಿಖರಸ್ಥಿತಿ, ಭಾವ ಶಮನ–ಇಂಥ, ನಮಗೆ ಪರಿಚಿತವಾದ, ಗಂಭೀರ ನಾಟಕ ರಚನಾ ತಂತ್ರ ಇಲ್ಲಿಲ್ಲ. "ಹೋರಾಟದ ಫಲವಾಗಿ ಆಗಲಿ, ಘಟನೆಗಳ ಸಂಯೋಜನೆಯಿಂದಾಗಲಿ, ದುರಂತದ ಕಡೆಗೆ ಸಾಗುವ" ರೀತಿಯೂ ಇಲ್ಲಿಲ್ಲ. ಇಲ್ಲಿ ನಿರೂಪಣೆಯೇ ಪ್ರಧಾನ ಪಾತ್ರ ವಹಿಸುತ್ತದೆ. ಬಾಹ್ಯಕ್ರಿಯೆ ಇಲ್ಲವೇ ಇಲ್ಲ ಎಂಬಷ್ಟು ಅಲ್ಪ ಪ್ರಮಾಣದ್ದಾಗುತ್ತದೆ. ನಡೆಯುವ ದುರಂತ ನಾಟಕದ ಆರಂಭಕ್ಕೂ ಮೊದಲೇ ನಡೆದು ಹೋಗಿದೆ: ಯುದ್ಧ ಮುಗಿದು ಪರ್ಷಿಯ ಸೋತು ಆಗಿದೆ. ಇಲ್ಲಿರುವುದು ಕೇವಲ ಸೋಲಿನ ನಿರೂಪಣೆ ಮತ್ತು ಆ ಸೋಲಿನಿಂದ ಮನುಷ್ಯರು. ಮುಖ್ಯವಾಗಿ ಗ್ರೀಕರು. ಕಲಿಯಬೇಕೆಂದು ಈಸ್ಕಿಲಸ್ ಬಯಸುವ ನೀತಿ. ಘಟನೆ ಪ್ರೇಕ್ಷಕರಿಗೆಲ್ಲ ಪರಿಚಿತವಾದ್ದರಿಂದ, ಅವರೆಲ್ಲರನ್ನು ಗಾಢವಾಗಿ ಕಲಕಿದ ಸಂಗತಿಯಾದದ್ದರಿಂದ, ಈಸ್ಕಿಲಸನ 'ನಾಟಕ' ಕೇವಲ ನೆಪ ಮಾತ್ರದ ನಿರೂಪಣೆಯಾಗಿ ನಿಜವಾದ 'ನಾಟಕ' ಪ್ರೇಕ್ಷಕರ ಮನಸ್ಸುಗಳಲ್ಲಿ ನಡೆಯುತ್ತಿದ್ದಿರಬೇಕು. 'ನಾಟಕ'ದ ಒಂದೊಂದು ಮಾತೂ ಕೇವಲ ಎಂಟು ವರ್ಷಗಳ ಹಿಂದಷ್ಟೆ ನಡೆದ ಘಟನೆಗಳು ಅಥೆನ್ಸಿನ ಜನರ ಮನಸ್ಸಿನಲ್ಲಿ ಮರುಸೃಷ್ಟಿಗೊಳ್ಳುವಂತೆ ಮಾಡಿ ಭಾವೋದ್ವೇಗದ ವಿದ್ಯುತ್ ಸಂಚಾರ ಹುಟ್ಟಿಸುತ್ತಿದ್ದಿರಬೇಕು. ಆದ್ದರಿಂದ "ಪಾರಸಿಕರು" ಈಸ್ಕಿಲಸನಲ್ಲಿ ನಮಗೆ ಬರಹದ ಮೂಲಕ ಸಿಗುವುದು ಶೇಕಡಾ ಐವತ್ತು ಅಥವಾ ಇನ್ನೂ ಕಡಿಮೆ. ಕೃತಿಯಲ್ಲಿ ನಾಟಕೀಯತೆ ಇಲ್ಲದಿದ್ದರೂ 'ನಾಟಕ' ಪ್ರೇಕ್ಷಕರ ಮನಸ್ಸಿನಲ್ಲಿ ಸಂಭವಿಸುವಂತೆ ಪ್ರಚೋದಿಸುವ 'ಕಾರಣ' ಆಗಿತ್ತು. ಇಂಥ ಕೃತಿ ಕನ್ನಡಕ್ಕೆ ಬಂದಾಗ ಸಹಜವಾಗಿಯೇ ತಣ್ಣಗಾಗುತ್ತದೆ. ಗ್ರೀಕರ ಕಾಲ–ದೇಶಬದ್ಧ ಅನುಭವ ನಮ್ಮದಲ್ಲವಾದ್ದರಿಂದ, ಉತ್ತಮ ಗಂಭೀರ ನಾಟಕ ನಮ್ಮ ಮನಸ್ಸನ್ನು ಕಲಕಬೇಕು ಇತ್ಯಾದಿ ನಿರೀಕ್ಷೆಗಳನ್ನಿಟ್ಟುಕೊಂಡು ಈಸ್ಕಿಲಸನು ಈ ಕನ್ನಡ ಭಾಷಾಂತರ ಓದಿದರೆ ನಿರಾಸೆ ಖಂಡಿತವಾಗಿ ಆಗುತ್ತದೆ. ಬರೆದ ನಾಟಕವನ್ನೇನೋ ಭಾಷಾಂತರಿಸಬಹುದು, ಆದರೆ 'ನಾಟಕ'ಕ್ಕೆ ಕಾರಣವಾದ ಜನ ಸಮೂಹದ ಅನುಭವವನ್ನು ಮನಸ್ಥಿತಿಯನ್ನು ಕನ್ನಡಕ್ಕೆ ಒದಗಿಸುವುದು ಹೇಗೆ? ಕನ್ನಡ "ಪಾರಸಿಕರು" ಜನಪ್ರಿಯವಾಗದಿರುವುದಕ್ಕೆ, ಚರ್ಚೆ ನಡೆಯದಿರುವುದಕ್ಕೆ ಇದೂ ಒಂದು ಮುಖ್ಯ ಕಾರಣ. "ಪಾರಸಿಕರು" ಅಭ್ಯಾಸ ಮಾಡಿ ತಿಳಿಯಬೇಕಾದ, ಬೌದ್ಧಿಕವಾಗಿ ಮಾತ್ರ ಅನುಭವಿಸಬಹುದಾದ ತಣ್ಣನೆ ನಾಟಕ ಅನ್ನಿಸಿಬಿಡಬಹುದು.

ಇದನ್ನು "ಪಾರಸಿಕರು" ಅಳವಡಿಸಿಕೊಂಡಿರುವ ನಿರೂಪಣೆಯ ತಂತ್ರವನ್ನು ಸ್ವಲ್ಪ ಗಮನಿಸಬಹುದು.

ಈಸ್ಕಿಲಸನ ನಾಟಕ (ಇಂಗ್ಲೀಷ್ ಅನುವಾದದಲ್ಲಿ) 1016 ಸಾಲುಗಳಿವೆ. ಕನ್ನಡ ಭಾಷಾಂತರದಲ್ಲಿ 933 ಸಾಲುಗಳಿವೆ. ಇದರಲ್ಲಿ ನಿರೂಪಣೆಯ ಅರು ನಿರ್ದಿಷ್ಟ ಘಟ್ಟ ಗುರುತಿಸಬಹುದು. 1) ಸಾಲು 1 ರಿಂದ 183 ರ ವರೆಗೆ : ಪರ್ಷಿಯದ ರಾಜಧಾನಿ ಸೂಸದಲ್ಲಿ ನಗರದ ಹಿರಿಯರ ಮೇಳ, ಹೆಲನರ ಮೇಲೆ ದಂಡೆತ್ತಿಹೋದ ಕ್ಷಯಾರ್ಷ ಮತ್ತವನ ಸೈನ್ಯದ ಸುದ್ದಿ ತಿಳಿಯದೆ ವ್ಯಾಕುಲಗೊಂಡಿದ್ದಾರೆ. ಪರ್ಸ್ಯದ ಹಿರಿಮೆ, ಸುದ್ದಿ ತಿಳಿಯದ ಆತಂಕ, ವಿಧಿ–ದೇವರ ಅಣತಿ ಬಗ್ಗೆ ಕಳವಳ, ವಿನಾಶದ ಸ್ಪಷ್ಟ–ಅಸ್ಪಷ್ಟ ಮುನ್ಸೂಚನೆ. ಪ್ರಾರ್ಥನೆಯ ಬಯಕೆ ಈ ಭಾಗದಲ್ಲಿ ನಿರೂಪಿತವಾಗುತ್ತದೆ.

"ಅಳುಕು ಬಹುದೇಕೆನಗೆ, ಮತ್ತೆ ಭಯದಿರಿತ ?
ಮತ್ತೆ ಮರುಳದೊ, ನಮ್ಮ ದಳುಕಿಹುದೊಮುರಿತ ?
ಸೂಸ ಪುರಿ ಬೆಳಗನೊಳ್, ಹಾದರೋ ಮತ್ತೆ ?
ಹಾಳು ಬೀಡೆನಿಪುದೇ ಇನ್ನದಕೆ ಹೊತ್ತೆ ?"
(4·1 ; ಸಾಲು 147–150)

ಇದು ಈ ಭಾಗದಲ್ಲಿ ಮುಖ್ಯವಾಗಿ ವ್ಯಕ್ತವಾಗುವ ಭಾವ. 2) ಸಾಲು 183 ರಿಂದ 260ರ ವರೆಗೆ ; ಹುತೌಷಳ (ಸತ್ತರಾಜ ದರ್ಯವೃಷನ ಹೆಂಡತಿ, ಕ್ಷಯಾರ್ಷನ ತಾಯಿ) ಪ್ರವೇಶ. ರಾತ್ರಿ ಬಿದ್ದ ಕೆಟ್ಟ ಕನಸು, ಹಗಲು ಕಂಡ ಉತ್ಪಾತಗಳಿಂದ ಕಂಗಾಲಾದ ಆಕೆ ಮೇಳದವರ ಬಳಿ ಮುಂದೇನೆಂಬ ಸಲಹೆ ಕೇಳಲು ಬರುತ್ತಾಳೆ. ಇಲ್ಲಿ ಅವಳು ಕಂಡ ಕನಸಿನ ವರ್ಣನೆ ಬರುತ್ತದೆ. ಒಳಿತಿಗೆ ದೇವರನ್ನು ಪ್ರಾರ್ಥಿಸು ಎಂಬ ಸಲಹೆ ದೊರೆಯುತ್ತದೆ. ಮೇಳದೊಡನೆ ಆಕೆ ನಡೆಸುವ ಮಾತಿನಲ್ಲಿ ಪರ್ಷಿಯಕ್ಕೂ ಅಥೆನ್ಸಿಗೂ ಇರುವ ವ್ಯತ್ಯಾಸದ ಪ್ರಸ್ತಾಪ ಬರುತ್ತದೆ.

ಹುತೌಷ : ಆಳ್ಗಳಿರಲಿ, ಸಿರಿ ಇಹುದೋ ? ನಮ್ಮ ಸಿರಿಗೆ ಸರಿಯದೊ ?

ಮೇಳ : ಬೆಳ್ಳಿ ಹೊಸಲ ಬಸಿರಿಂದ ಭೂಮಿಯೆ ತಾನ್ ಸುರಿವಳು.

ಹುತೌಷ : ಅಂಬನೆಸೆದು ನಾಟಬಲ್ಲ ಬಿಲ್ಲ ಕೊಬ್ಬೊ ಅವರದು ?

ಮೇಳ : ಇಲ್ಲ, ತಾಯಿ. ನಾಟು ಈಟಿ, ಹೊತ್ತ ಹರಿಗೆ, ಕಟ್ಟಣೆ.

ಹುತೌಷ : ಆ ಹಿಂಡಿಗೆ ಕುರುಬನಾರು ? ಒಡೆದು ? ಆಳ್ವ ಪೆರ್ದೊರೆ ?

ಮೇಳ ; ದೊರೆಗೆ ಆಳ್ಗಳಲ್ಲ ಅವರು, ತಮ್ಮ ತಾವೆ ಆಳ್ವರು.

ಹುತೌಷ : ಒಡೆಯರಾಳ್ವ ಪಡೆಯನವರೆಂತು ತಡೆಯಲಾಪರು ?

ಮೇಳ : ದರ್ಯವೃಷನ ಬಲ್ಲನದನು-ಹಿರಿಯ ಪಡೆ ! ಸಿರಿಯ ಪಡೆ !

(ಕೊನೆಯ ಮಾತು ಇಂಗ್ಲಿಷಿನಲ್ಲಿ ಹೀಗಿದೆ : They destroyed Dereiu's army great in number fair in show) –250–257

ತಮ್ಮನ್ನು ತಾನೆ ಆಳಿಕೊಳ್ಳುವ, ಯಾರಿಗೂ ಗುಲಾಮರಲ್ಲದ ಅಥೆನ್ಸಿನ ಜನರಿಗೆ ದೈವವೂ ಸಹಾಯ ಮಾಡಿತು ಎಂಬುದು, ಮುಂದಿನ ಘಟ್ಟದಲ್ಲಿ ದೂತನ ಮಾತಿನಿಂದ ತಿಳಿಯುತ್ತದೆ. ರಾಜತ್ವದ ಅಹಂಕಾರ, ಮನುಷ್ಯನ ಮಿತಿಯನ್ನೇ ಮರೆಸಿ, ರಾಜನನ್ನು ಮಾತ್ರವಲ್ಲ ಇಡೀ ರಾಜ್ಯವನ್ನು ದುರಂತಕ್ಕೆ ಕೆಡಿಸಿತು–ಎಂಬುದು ಈಸ್ಕಿಲಸನ ಧೋರಣೆ ಎಂದು ಊಹಿಸಬಹುದು. 3) ಸಾಲು 261 ರಿಂದ 444ರ ವರೆಗೆ ಹರಡಿರುವ ನಿರೂಪಣೆಯ ಮೂರನೆ ಭಾಗದಲ್ಲಿ : ಕತೆ ಮುಂದುವರೆಯುತ್ತದೆ, ಅದೂ ದುರಂತದ ಪ್ರತ್ಯಕ್ಷ ದರ್ಶಿಯ ಮಾತಿನಲ್ಲಿ. ದೀರ್ಘವಾದ, ಸತ್ತ ವೀರರ ಹೆಸರುಗಳ ಪಟ್ಟಿ ಇದೆ, ಯುದ್ಧದ ವರ್ಣನೆ ಇದೆ. ಪಾರಸಿಕರ ಕಗ್ಗೊಲೆಯ ಚಿತ್ರವಿದೆ, ಸೋತು ಹಿಂದೋಡಿದ ಪಾರಸಿಕರು ಅನುಭವಿಸಿದ ಕೋಟಲೆಗಳ ವಿವರಗಳು ದೊರೆಯುತ್ತವೆ. ಈ ಭಾಗದಲ್ಲಿ ಅತ್ಯುತ್ತಮವೆನಿಸುವ ಕಾವ್ಯ ಭಾಗಗಳು, ತೀರ ವಾಸ್ತವವೆನಿಸುವ ಯುದ್ಧ ಚಿತ್ರ ಇವೆ. (ಸಾಲು 360 ರಿಂದ 380ರ ವರೆಗಿನ ಭಾಗವನ್ನು ಗಮನಿಸಿ). "ದೇವರ್ಕಳಿಡರ ಕೊಡೆ ಹೊರಬೇಕು ತಾಳ್ಮೆಯಲಿ/ಮರ್ತ್ಯರಾದವರು" (295) "ನಮ್ಮಳವೆ ? ಆದೈವ ಚಿತ್ತಂ" (431) ಇಂಥ ಮಾತುಗಳು ವಿಧಿಯ ಹಿರಿಮೆಯನ್ನು ಮನುಷ್ಯನ ಅಲ್ಪತೆಯನ್ನು ಸಾರುವಂತೆ ಇಲ್ಲಿ ಅನೇಕ ಕಡೆ ಬರುತ್ತವೆ. ಈ ಭಾಗದ ಮತ್ತೊಂದು ಸ್ವಾರಸ್ಯಕರ ಅಂಶವೆಂದರೆ. ಈಸ್ಕಿಲಸ್ ತನ್ನ ದೇಶದ ಶತ್ರುವಿನ ಬಾಯಿಂದ, ಅದೂ ಸೋತವನ ಬಾಯಿಂದ, ತನ್ನ ಅಥೆನ್ಸಿನ ಹಿರಿಮೆಯನ್ನು ತೀರ ಸಹಜವೆಂಬಂತೆ ಹೊಗಳಿಸಿರುವುದು : ಮತ್ತು "ಹಬ್ಬಿದ ಹಮ್ಮಿನಲಿ ಸದ

ಗರಿಸಿ, ಕೈ ಬೀಸಿದನೊ ನಮ್ಮ ಮಗನು ?" (334) "ಮುಂದಪ್ಪುದನು ಕಾಣ, ದೇವರ್ಕೊಳೊಳಗೆಯೇ ಸೆಯ್ಯುವುದ ಕಾಣ" (346) "ಓ ಕ್ರೂರಿ, ಮತ್ಸರದ ದೈವವೆ ! ಆನೆ ಹೆಜ್ಜೆಯನಿಟ್ಟು ಹೊಸಕಿದೆಯ ಹೊರಳಿಸುತ ಪಾರಸಿಕ ಜನವನ್" (433) ಇಂಥ ಸಮತೋಲನದ ಮಾತುಗಳಿಂದ "ಹೆಮ್ಮೆ" ಹೇಗೆ, ಅಥೆನ್ಸ್ ಕೊಬ್ಬಿದರೆ, ಪಾರಸಿಕರ ಪತನಕ್ಕೆ ಕಾರಣವಾದಂತೆ ತಮಗೂ ಮೃತ್ಯು ಆದೀತು ಎಂದು ಎಚ್ಚರಿಸುವ ಧ್ವನಿ ಇರುವಂಥದ್ದು. ಆದರೂ ಕನ್ನಡದ ಮಟ್ಟಿಗೆ ಸಾಕಷ್ಟು ದೀರ್ಘವಾದ ಈ ನಿರೂಪಣಾ ಭಾಗ ತೀರ ನೀರಸ ಎಂದೇ ಎನ್ನಿಸೀತು. ವೀರರ ಹೆಸರಿನ ಪಟ್ಟಿ ನಮಗೆ ಕೇವಲ ಹೆಸರುಗಳಷ್ಟೇ ಆಗಿ ಉಳಿದೀತು.

4) ಸಾಲು 445 ರಿಂದ 506ರ ವರೆಗೆ ಇರುವ ನಿರೂಪಣೆಯ ನಾಲ್ಕನೆಯ ಘಟ್ಟ ಮೇಳದ ಗೀತೆಯ ಮೂಲಕ ಪರ್ಷಿಯದ ದುರಂತದ ವಿವಿಧ ಆಯಾಮಗಳನ್ನು ಚಿತ್ರಿಸುತ್ತದೆ. ನಡೆದ ಘಟನೆ ಪಾರಸಿಕರ "ಸೊಕ್ಕು" ಮುರಿಯಲು ದೇವರು ಹೂಡಿದ ಹೂಟ ; ಇಡೀ ಒಂದು ಜನಪದ ವ್ಯರ್ಥವಾಯಿತು ; ಹಳೆಯ ನಂಬಿಕೆಗಳೆಲ್ಲ, ಸಂಸ್ಕೃತಿಯ ಮೌಲ್ಯಗಳೆಲ್ಲ ನಾಶವಾಯಿತು ಎಂದು ಮೇಳ ಗೋಳಿಡುತ್ತದೆ.

"ಒಡೆಯ ಬಾರದ ಕೊರಗು ಮನೆಗೆ ; ಇನಿಯ ಬಾರದ ಕೊರಗು ಹೆಣ್ಣೆ
ಮಕ್ಕಳಿಲ್ಲದ ಕೊರಗು ಮುಪ್ಪಿಂಗೆ, ಕಾವರಿಲ್ಲದ ಕೊರಗು ಮಕ್ಕಳ್ಗೆ"
(೪೪೦–೪೯೧)

ಎಂಬ ಮಾತು ತೀರ ಮನಕಲಕುವಂತೆ ಯುದ್ಧದ ಅಮಾನವೀಯತೆಯನ್ನು ಚಿತ್ರಿಸಿದರೆ,

"ಸಡಿಲಿದುದು ಸಾಮ್ರಾಜ್ಯ ; ರಾಜರ ಭಯನೆ ತೊಲಗಿತು !
ಪೋಯ್ತು ಬಲವೆ" (೪೯೯)

ಎಂಬ ಮಾತುಗಳು ಮನುಷ್ಯ ಸಮಾಜದ ಪರಿವರ್ತನೆಯ ಒಂದು ಘಟ್ಟವನ್ನು, ಯುದ್ಧ ನಿರ್ಣಾಯಕವಾಗಿ, ಅನಿವಾರ್ಯವಾಗಿ ತಂದಬದಲಾವಣೆಯನ್ನು ಧ್ವನಿಸುತ್ತದೆ.

ಇಡೀ ನಾಟಕದ ಅತ್ಯುತ್ತಮ ಭಾಗ, 5) ಸಾಲು 507 ರಿಂದ 783ರ ವರೆಗೆ ಚಾಚಿಕೊಂಡಿರುವ ನಿರೂಪಣೆಯ ಐದನೆಯ ಘಟ್ಟ. "ನಾಟಕೀಯ ಪಾತ್ರ ಚಿತ್ರಣ" (ಡ್ರಾಮೆಟಿಕ್ ಕ್ಯಾರೆಕ್ಟರೈಸೇಷನ್)ದ ಪ್ರಥಮ ಪ್ರಯತ್ನಗಳನ್ನು ಈ ನಾಟಕದಲ್ಲಿ, ಮುಖ್ಯವಾಗಿ ಈ ಭಾಗದಲ್ಲಿ ಗಮನಿಸಬಹುದು. ಪಾತ್ರವೊಂದರ ಮನೋವಿಶ್ಲೇಷಣೆ ಈಸ್ಕಿಲಸನ ಕಾಲದ ರಂಗಭೂಮಿಗೆ ಅಪರಿಚಿತವಾಗಿತ್ತು. ರಕ್ತ ಮಾಂಸ ತುಂಬಿದ 'ಜೀವಂತ' ಪಾತ್ರಗಳು ಇರಲೇ ಇಲ್ಲವೆಂದರೂ ಸರಿ. 'ಪರ್ಷಿಯನ್ಸ್'ನಲ್ಲಿ ಬರುವ 'ಹುತೌಷ' ನಮಗೆ ಪಾತ್ರ ಚಿತ್ರಣ ಪ್ರಯತ್ನ ಪಳಯುಳಿಕೆಯಾಗಿ ಕಾಣುತ್ತಾಳೆ. ಈ ಐದನೆಯ ಘಟ್ಟದಲ್ಲಿ ವಿವಿಧ ಮನೋವೃತ್ತಿಗಳ ಸಂಘರ್ಷವನ್ನು ಚಿತ್ರಿಸುವ ಹಂಬಲ ಇರುವುದನ್ನು ಗುರುತಿಸಬಹುದು. ದರ್ಯವೃಷನ ಪ್ರೇತಾತ್ಮದ ಆವಾಹನೆ ಕೇವಲ ದೃಶ್ಯ ವೈಭವವಾಗಿ ಅಷ್ಟೇ ಉಳಿಯುವುದಿಲ್ಲ, ಈಸ್ಕಿಲಸನ ಉದ್ದೇಶಕ್ಕೆ ಅತ್ಯಂತ ಅಗತ್ಯವಾದದ್ದಾಗುತ್ತದೆ. ಪರ್ಷಿಯಾಕ್ಕೆ ಬಂದೆರಗಿದ ದುರಂತದ ಅರ್ಥ ಏನು ? ಯಾಕೆ ಹೀಗಾದದ್ದು ? ಪರಿಣಾಮ ಏನು ? ಇಂಥ ವಿವರಗಳನ್ನು ಈಸ್ಕಿಲಸ್ ದರ್ಯವೃಷನ ಪ್ರೇತಾತ್ಮಕ ಮುಖಾಂತರ ತಿಳಿಸುತ್ತಾನೆ. ಹುತೌಷ ತಾಯಿಯಾಗಿ ಕ್ಷಯಾರ್ಷನ ದುರಂತವನ್ನು ಸಹಿಸಲಾರಳು. ಮೇಳ ಸುದ್ದಿ ದಿಗ್ಭ್ರಾಂತವಾಗಿದೆಯಾದ್ದರಿಂದ. ಇತರ ಗ್ರೀಕ್ ಮೇಳಗಳಂತೆ, ತಾತ್ವಿಕ ಚಿಂತನೆಗಳಲ್ಲಿ ತೊಡಗುವ ಸಮತೋಲನ ಕಳೆದುಕೊಂಡಿದೆ. ದೂತ ಯುದ್ಧಭೂಮಿಯಿಂದ ಪೆಟ್ಟು ತಿಂದು ಬಂದವ ನಿಷ್ಪಕ್ಷಪಾತವಾಗಿ ನಡೆದ ಸಂಗತಿ ಕಾಣಲಾರ. ಹಾಗಾಗಿ ಭೌತಿಕ ದೇಹದ ಕಟ್ಟು ಮೀರಿದ, ಅಧೋಲೋಕದಲ್ಲಿ ವಿಶೇಷ ಅರಿವು ಪಡೆದ ದರ್ಯವೃಷನ ಆತ್ಮ ಕಾಣಿಸಿಕೊಂಡು ಪರ್ಷಿಯದ ಹಿಂದಿನ ಹಿರಿಮೆ, ಇಂದಿನ ದುರಂತದ ಕಾರಣ, ಮುಂದೆ ಕಾದಿರುವ ವಿನಾಶಗಳನ್ನೂ ತಿಳಿಸಿ, ಇವಕ್ಕೆಲ್ಲ ಪರ್ಷಿಯನರ ಹೆಮ್ಮೆ ಅಹಂಕಾರಗಳೇ ಮೂಲ ಎಂದು ತಿಳಿಸುತ್ತದೆ.

"ಅಪ್ರೊನುಂ ಹೆಬ್ಬಯಕೆಗೆಲವತ್ತು, ಮಿತಿ ಮೀರಿ,
ಕಯ್ಗೆ ಬಾರದ ಗುರಿಗೆ ಕಟ್ಟೊಲ್ಮೆಯನ್ ತೆತ್ತು,
ಕಳೆಯಬಾರದು ದೇವರಿತ್ತೊಂದು ಭಾಗ್ಯವನ್.
ಗಗನಕ್ಕೆ ನೆಗೆದಡರುವರ ಹಮ್ಮುಗಳ ಮೆಟ್ಟಿ,
ತಕ್ಕ ಕಾಲದ ಕೊಬ್ಬನಿಳಿಸದಿರನಾ ಸ್ಯೂಸ್"
(೭೧೦–೭೧೪)

ಇದು ಈಸ್ಕಿಲಸ್‌ನ ಪ್ರತಿಪಾದಿಸಲು ಬಯಸುವ ತತ್ತ್ವವೂ ಹೌದು. ದರ್ಯವೃಷನೊಡನೆ ಮೇಳ ಮಾತಾಡಲು ಅಂಜು

ವುದು, ಹುತೌಪ ಪ್ರಶ್ನೆಗಳನ್ನು ಕೇಳುವುದು ಇಂಥ ಭಾಗದಲ್ಲಿ ಪಾತ್ರಗಳ ಮನೋವೃತ್ತಿ ಬಗ್ಗೆ ಈಸ್ಕಿಲಸ್ ಚಿಂತಿಸತೊಡಗಿದ್ದ ಎಂಬುದು ವ್ಯಕ್ತವಾಗುತ್ತದೆ.

ಸಾಲು 784 ರಿಂದ 933ರ ವರೆಗೆ ಇರುವ ಭಾಗ ನಿರೂಪಣೆಯ ಕೊನೆಯ ಘಟ್ಟ. ಸೋತು, ಜರ್ಜರಿತನಾಗಿ, ನಿಸ್ತೇಜನಾದ ಚಕ್ರವರ್ತಿ ಕ್ಷಯಾರ್ಷ ಕಾಣಿಸಿಕೊಳ್ಳುತ್ತಾನೆ. ಮೇಳ ಅವನೊಡನೆ ಕಠಿಣವಾಗಿ ವರ್ತಿಸುತ್ತದೆ. ಕೊನೆಗೆ ತೀವ್ರವಾದ ಗೋಳಿನಲ್ಲಿ, ನಾಟಕ ಮುಗಿಯುತ್ತದೆ.

ಇಡೀ ನಾಟಕ ಹೀಗೆ ಒಂದು ಅಖಂಡ ನಿರೂಪಣೆ. ಇದನ್ನು ಒಟ್ಟಿಗೆ ಹಿಡಿದಿಡಲು ಯಾವುದೇ ಒಂದು 'ಪಾತ್ರ' ಇಲ್ಲ. ಅದರ ಬದಲಿಗೆ ಈಸ್ಕಿಲಸನ ಗಂಭೀರ ಶೈಲಿ, ಮತ್ತು ಕಾವ್ಯ ಇದೆ. ಈ ಅಂಶಗಳ ವಿವೇಚನೆ ದೀರ್ಘವಾಗುವುದರಿಂದ ಇಲ್ಲಿ ಕೆಲವು ಸೂಚನೆಗಳನ್ನಷ್ಟೆ ಕೊಡಬಹುದು. ಕತ್ತಲು–ಬೆಳಕುಗಳ ವೈರುಧ್ಯ, ಹೂವು, ಬಲೆ –ಕೊನೆಯ ಪಕ್ಷ ಈ ಮೂರು ನಾಟಕದುದ್ದಕ್ಕೂ ಪ್ರತಿಮೆಗಳಾಗಿ ಬೆಳೆದು ನಿರೂಪಣೆಗೆ ಐಕ್ಯವನ್ನು ಒದಗಿಸುತ್ತವೆ.

"ಪಾರಸಿಕರು" ಇಷ್ಟವಾಗದಿರುವುದಕ್ಕೆ ಕಾರಣಗಳು ಮೂಲ ಕೃತಿಯಲ್ಲೇ ಇವೆ. ಕ್ರಿಯೆಯ ಅಭಾವ, ಉದಾತ್ತವಾದ ಪಾತ್ರಗಳಿಲ್ಲದಿರುವುದು. ನಿರೂಪಣೆಯಲ್ಲಿರುವ ನಾಟಕೀಯತೆಯ ಅಭಾವ ಇತ್ಯಾದಿ. ಆದರೆ ಭಾಷಾಂತರ ಕೃತಿಯಾಗಿ "ಪಾರಸಿಕರು" ಸಾಧಿಸಿದ್ದೇನು ಎಂಬ ಪ್ರಶ್ನೆಗೆ ಉತ್ತರ ಕೊಡುವುದು ಸ್ವಲ್ಪ ಕಷ್ಟದ ಕೆಲಸ. ಭಾಷಾಂತರದಿಂದ ನಾವು ಏನನ್ನು ನಿರೀಕ್ಷಿಸುತ್ತೇವೆ ? ನಾಟಕವನ್ನು ಕುರಿತು ನಮಗೆ ಯಾವ ಧೋರಣೆಗಳಿವೆ ? ಎಂಬ ಪ್ರಶ್ನೆಗಳು ಮುಖ್ಯವಾಗುತ್ತವೆ. ಮೂಲಕ್ಕೆ ನಿಷ್ಠವಾಗಿರಬೇಕು ಹಾಗೂ ಭಾಷಾಂತರಗೊಂಡ ಭಾಷೆಯ ಜಾಯಮಾನಕ್ಕೆ ಸಹಜವೆನಿಸುವಂತಿರಬೇಕು ಎಂಬ ಎರಡೂ ಅಪೇಕ್ಷೆಗಳು ಭಾಷಾಂತರಕಾರನನ್ನೂ ವಿರುದ್ಧ ದಿಕ್ಕುಗಳಲ್ಲಿ ಸೆಳೆಯುವ ಅಂಶಗಳು. ಹಾಗಾಗಿ "ಧರೆಯ ಲಕ್ಷ್ಮಿಯರ ತಲೆಯೂರಾಮು" (ಸಾಲು 111), "ಪಾರಸಿಕ ವೀರರಿಗೆ ಹಾ ರಾಮುಕೇತು"" (ಸಾಲು 156) "ರುದ್ರ ಮಾಯೆ" (ಸಾಲು 144) ಇಂಥ ಮಾತುಗಳು ಸಹಜ ಕನ್ನಡ ಪ್ರಯೋಗಗಳಾಗಿದ್ದರೂ ಗ್ರೀಕ್ ವಾತಾವರಣದಲ್ಲಿ ಈ ಭಾರತೀಯ ಕಲ್ಪನೆಗಳು ಅಷ್ಟು ಹೊಂದಲಾರವೆನಿಸುತ್ತದೆ. ಈಸ್ಕಿಲಸನನ್ನು ಕನ್ನಡಕ್ಕೆ ಮೊದಲು ಪರಿಚಯ ಮಾಡಿಸಿದ್ದು, ನಾಟಕ ರಚನೆಯ ಸಾಧ್ಯತೆಗಳನ್ನು ಅನ್ವೇಷಿಸಿದ್ದು, ನಿಸ್ಸಂದೇಹವಾಗಿ "ಪಾರಸಿಕರು" ಮಾಡಿದ ಸಾಧನೆಗಳು.

ನಾಟಕವೆಂಬುದು ಒಂದು ಸಂಕೀರ್ಣ ಪ್ರದರ್ಶಕ ಕಲೆ. ಅದರ ಸ್ವರೂಪ ಮತ್ತು ನಿಯಮಗಳು ಕಾವ್ಯ ಅಥವಾ ಕಾದಂಬರಿ ಇಂಥ 'ಶ್ರವ್ಯ ಕಾವ್ಯ'ಕ್ಕಿಂತ ಭಿನ್ನ ಎಂಬ ಅರಿವು ನವೋದಯ ನಾಟಕ ಲೇಖಕರಿಗೆ ಅಷ್ಟು ಸ್ಪಷ್ಟವಾಗಿರಲಿಲ್ಲವೇನೋ ಎಂದು ತೋರುತ್ತದೆ. 'ಇಂಗ್ಲಿಷ್ ಗೀತೆಗಳು' ಕನ್ನಡ ಕಾವ್ಯದ ಮೇಲೆ ಮಾಡಿದ ಪರಿಣಾಮಕ್ಕೂ "ಪಾರಸಿಕರು" ಅಥವಾ ಇತರ ನಾಟಕಗಳು ಕನ್ನಡ ನಾಟಕದ ಮೇಲೆ ಮಾಡದೆ ಹೋದ ಪರಿಣಾಮಕ್ಕೂ ಮುಖ್ಯ ಕಾರಣ ಇದೇ-ನವೋದಯ ನಾಟಕಕಾರರು ರಂಗಭೂಮಿಯ ಪ್ರದರ್ಶನವನ್ನು ಉದ್ದೇಶಿಸಿ ಬರೆಯಲಿಲ್ಲ. ನಾಟಕವೂ 'ಸಾಹಿತ್ಯ'ವೆಂದೇ ಅವರ ಧೋರಣೆಯಾಗಿತ್ತು. ಶ್ರೀಯವರು ಹೇಳುವ ಈ ಮಾತುಗಳನ್ನು ಗಮನಿಸಿ : "ಹಳಗನ್ನಡದಲ್ಲಿ ನನಗೂ ಅಕ್ಕರೆ ಉಂಟು ; ತಿಳಿಯಾದ ಬಿಗಿಯಾದ, ತಿರುಳಾದ, ಇಂಪಾದ ಆ ನುಡಿಯನ್ನು ಕೈಬಿಡುವುದೆಂದರೆ ನನಗೂ ವ್ಯಸನವೇ. ಮುಂದೆ ಜನರಲ್ಲಿ ಅದರ ತಿಳಿವಳಿಕೆ ಹೆಚ್ಚಿದ ಮೇಲೋ. ಇಲ್ಲ. ಕೇವಲ ವಿದ್ವಾಂಸರ ತಿಳಿಯಬೇಕಾದ ತತ್ವಗಳಿಗಾಗಿಯೋ. ಇಲ್ಲ. ಪರಮೋತ್ಕೃಷ್ಟವಾದ ಕಾವ್ಯ–ನಾಟಕ-ಗೀತೆಗಳಿಗಾಗಿಯೇ ಅದನ್ನು ಉಪಯೋಗಿಸಬಹುದು". ["ಶ್ರೀ ಸಾಹಿತ್ಯ". ಪುಟ 254] ಈ ಮಾತು ಶ್ರೀಯವರಿಗೆ ಹಳಗನ್ನಡದ ಮೇಲೆ ಇರುವ ಅಭಿಮಾನವನ್ನು ತೋರುತ್ತದೆ. ಶ್ರೀಯವರಿಗೆ ಭಾಷೆ, ಲಯ, ಛಂದಸ್ಸುಗಳ ಮೇಲಿರುವ ಅಸಾಧಾರಣ ಹಿಡಿತದಿಂದಾಗಿ ಅವರ ಲೇಖನಿಯಿಂದ ಮೂಡಿದ ಈ ಹಳಗನ್ನಡ ಭಾಷಾಂತರ ಬಹಳ ಚೆನ್ನಾಗಿ ಓದಿಸಿಕೊಳ್ಳುತ್ತದೆ. ಮತ್ತು ಇದೇ ಕಾರಣದಿಂದ ರಂಗಭೂಮಿಯ ಮೇಲೆ ವಿಫಲವಾಗುತ್ತದೆ. ಜನರಲ್ಲಿ ಬಳಕೆಯಲ್ಲಿಲ್ಲದ, ಮತ್ತೆಂದೂ ಬಳಕೆಗೆ ಬರಲು ಸಾಧ್ಯವೇ ಇಲ್ಲದ. ಭಾಷಾ ರೂಪದ ನಾಟಕವನ್ನು "ವಿಶಿಷ್ಟ" ಪ್ರೇಕ್ಷಕರು ಮೆಚ್ಚಬಹುದು ಅಷ್ಟೆ. ನವೋದಯ ಕಾಲದಲ್ಲಿ ಭಾಷಾಂತರಗೊಂಡ ನಾಟಕ ಕೃತಿಗಳಲ್ಲಿ–ಶ್ರೇಷ್ಠ ನಾಟಕಗಳು–ಮ್ಯಾಕ್‌ಬೆತ್, ಪ್ರಮಿಥ್ಯೂಸ್, ಯೂರಿಪಿಡಸ್‌ನ ಮತ್ತು ಸೊಫೊಕ್ಲಿಸನ ಕೃತಿಗಳು ಇತ್ಯಾದಿ-ಶ್ರೀಯವರ ಮಾದರಿಯನ್ನೇ ಅನುಸರಿಸಿದವು. ಆದರೆ, ಶ್ರೇಷ್ಠ "ಸಾಹಿತ್ಯ"ವನ್ನು ಕನ್ನಡಕ್ಕೆ ತಂದವು. ಕನ್ನಡ ನಾಟಕ–

ರಂಗಭೂಮಿಯನ್ನು ಎಳ್ಳಷ್ಟೂ ಬದಲಾಯಿಸಲಿಲ್ಲ. 'ಇಂಗ್ಲಿಷ್ ಗೀತ'ಗಳಿಗೆ ಬಳಸಿದಂತೆ ನಾಟಕಕ್ಕೂ ಶ್ರೀಯವರು ಹೊಸಗನ್ನಡವನ್ನೇ ಬಳಸಿದ್ದರೆ. ಗ್ರೀಕ್‌ನ ದ್ವಿತೀಯ ದರ್ಜೆಯವೆನಿಸುವ ನಾಟಕಗಳ ಬದಲು 'ಈಡಿಪಸ್'ನಂಥ ಅಥವಾ ಷೇಕ್ಸ್‌ಪಿಯರನಂಥ ಕೃತಿಯನ್ನು ಆಯ್ದುಕೊಂಡಿದ್ದರೆ, ಕಾವ್ಯಕ್ಷೇತ್ರದಲ್ಲಿ ಬೀಸಿದಂಥ ಹೊಸಗಾಳಿ ಕನ್ನಡ ನಾಟಕ ಕ್ಷೇತ್ರದಲ್ಲೂ 1930ರ ದಶಕದಲ್ಲೇ ಬೀಸುತ್ತಿತ್ತೊ ಏನೋ. "ಪಾರಸಿಕರ"ನ್ನು ಇಷ್ಟು ವರ್ಷಗಳ ನಂತರ ಓದಿದ ಮೇಲೆ ಉಳಿಯುವ ಭಾವ ಇದೇ. "ಶ್ರೀಯವರ ಪ್ರತಿಭೆ ಮಹಾಕೃತಿಯೊಂದರ ಲಯಕ್ಕೆ ಸರಿಯಾಗಿ ಮಿಡಿಯಬಲ್ಲುದು, ಅದರ ಕರೆಗೆ ಓಗೊಡಬಲ್ಲುದು ; ಆದರೆ ತಾನೇ ಆ ಮಟ್ಟದ ಕೃತಿಯನ್ನು ಸೃಷ್ಟಿಸಲಾರದು." [ಎ. ಎನ್. ಮೂರ್ತಿರಾವ್, "ಚಿತ್ರಗಳು–ಪತ್ರಗಳು" ಪುಟ 87]. ಕೇವಲ ಭಾವೋದ್ವೇಗ ಪ್ರಧಾನವಾದ ಗದಾಯುದ್ಧ, ಅಥವ ಪಾರಸಿಕರುಗಳ ಬದಲಿಗೆ, ಗಾಢ, ಸಂಕೀರ್ಣ ನಾಟಕಗಳಿಗೆ ಶ್ರೀಯವರ ಪ್ರತಿಭೆ ಮಾರ್ನುಡಿದಿದ್ದರೆ–ಎಂಬ ಹಂಬಲ, ಹಳಹಳಿ ಖಂಡಿತ ಓದುಗನಲ್ಲಿ ಉಂಟಾಗುತ್ತದೆ.

---

"........'ಶ್ರೀ'ಯವರ 'ಇಂಗ್ಲಿಷ್ ಗೀತ'ಗಳಲ್ಲಿ ಎಲ್ಲ ಅಂಗಗಳಿಂದಲೂ ಪರಿಪೂರ್ಣವಾದ ಹೊಸಗನ್ನಡ ಕಾವ್ಯ ಸುಭದ್ರವಾಗಿ ಪ್ರತಿಷ್ಠಿತವಾಯಿತು. ಈ ಗೀತಗಳ ವಿಮರ್ಶೆ ಈಗ ಬೇರೆ ದೃಷ್ಟಿಯಿಂದಲೇ ಆಗಬೇಕಾಗಿದೆ. ರೂಢಿಯ ದೃಷ್ಟಿಯಿಂದ ಈ ಗೀತಗಳು ಅನುವಾದಗಳು. ಇವುಗಳ ಮೂಲಭಾವ, ಶೈಲಿ, ರೂಪವಿನ್ಯಾಸಗಳು ಇಂಗ್ಲಿಷ್ ಕಾವ್ಯದಿಂದಲೇ ಬಂದಿದ್ದರೂ ಇವು ಮುಖ್ಯವಾಗಿ ಕನ್ನಡದ ಕವನಗಳು. 'ಬಿಂಕದ ಸಿಂಗಾರಿ', 'ಕಾರಿ ಹೆಗ್ಗಡೆಯ ಮಗಳು', 'ದುಃಖಸೇತು' ಮೊದಲಾದ ಕವಿತೆಗಳು ಉತ್ಕೃಷ್ಟ ಅನುವಾದಕ್ಕೆ ಮಾದರಿಯಾಗಿವೆ ; 'ಬಾನಾಡಿ' 'ನನ್ನ ಪ್ರೇಮದ ಹುಡುಗಿ' 'ಒಂದು ಹಾತಸು ಲೋಕ ಹೊಲಿಗೆಡಿಸಿಕೊಂಡಿಹುದು' ಈ ಕವಿತೆಗಳು ಯಶಸ್ವಿಯಾಗಿಲ್ಲ. ಆದರೆ ಇವುಗಳನ್ನು ಅನುವಾದ ಎಂದು ನೋಡಲಾಗದು, ನೋಡಬಾರದು. ಹೊಸ ನುಡಿ–ಕಟ್ಟುಗಳು, ಹೊಸ ಬಗೆಯ ಲಯ–ತಾನಗಳು, ಲಘುವಾದರೂ ರಸಪೂರ್ಣವಾದ ಕಾವ್ಯ ವಸ್ತುಗಳು, ಸರಳವಾದ ಭಾಷೆ ಇವೆಲ್ಲ ಒಮ್ಮೆಲೆ ಒಂದು ಸಂಗ್ರಹದಲ್ಲಿ ಗೋಚರವಾದವು. ಪ್ರತಿಯೊಂದು ಕವನವೂ ಒಂದು ಜೀವಂತ ವಾಣಿಯಾಗಿ, ಕನ್ನಡ ಕಾವ್ಯವನ್ನು ಹೊಸ ಬಗೆಯಲ್ಲಿ ರೂಪಿಸುವ ಶ್ರೇಯಸ್ಸು ಪಡೆಯಿತು. ಈ ಸಂಗ್ರಹದ ಮೊದಲ ಪದ್ಯವಾದ 'ಕಾಣಿಕೆ'ಯಲ್ಲಿ ಬಿ. ಎಂ. ಶ್ರೀಯವರು ಈ ಸಂಗ್ರಹದ ಉದ್ದೇಶವನ್ನು ಹೇಳಿದ್ದಾರೆ. ಈ ಉದ್ದೇಶವನ್ನು ಈ ಸಂಗ್ರಹ ಯಶಸ್ವಿಯಾಗಿ ನೆರವೇರಿಸಿ ಕೃತಾರ್ಥವಾಗಿದೆ. ಕನ್ನಡ ಭಾಷೆಯ ಬಗ್ಗೆ ಅಭಿಮಾನ, ಅದು ಬೆಳೆಯಬೇಕೆಂಬ ಹಂಬಲ, ಅದಕ್ಕಾಗಿಯೇ ಇಂಗ್ಲಿಷ್ ಕಾವ್ಯದ ಪ್ರಭಾವದ ಅನಿವಾರ್ಯತೆ ಈ ವಿಚಾರಗಳು ಆ ಕವನದಲ್ಲಿವೆ. ಕನ್ನಡ ಕಾವ್ಯವನ್ನು ಮುಂದರಿಸುವುದರ ಶ್ರೇಯಸ್ಸು ಈ ಕವನ ಸಂಗ್ರಹಕ್ಕೆ ಸಲ್ಲಲೇಬೇಕಾಗಿದೆ.''

**ಕೀರ್ತಿನಾಥ ಕುರ್ತಕೋಟಿ**

'ಯುಗಧರ್ಮ ಹಾಗೂ ಸಾಹಿತ್ಯ ದರ್ಶನ'

# 'ಶ್ರೀ'ಯವರ 'ಗದಾಯುದ್ಧ ನಾಟಕಂ'

ಎಂ. ರಾಮಚಂದ್ರ

"'ಶ್ರೀ'ಯವರ ಕೃತಿಗಳನ್ನು ವಿಮರ್ಶಿಸುವವರಲ್ಲಿ ಒಬ್ಬೊಬ್ಬರ ಅಭಿಪ್ರಾಯ ಒಂದೊಂದಾಗಿರಬಹುದು. ಯಾವ ಕೃತಿಯೇ ಆಗಿರಲಿ ಟೀಕಾಬಾಹ್ಯವಾಗಿರುವುದಿಲ್ಲ. ಆಯಾ ಕಾಲದ ಸದಭಿರುಚಿಯನ್ನು ಅವಲಂಬಿಸಿಕೊಂಡೆ ಸಾಹಿತ್ಯವು ನಿಂತಿರುವುದು——'ಶ್ರೀ'ಯವರ ಕೃತಿಗಳು ಒಂದು ವಿಶಿಷ್ಟ ಪ್ರಕಾರದ ಅಭಿರುಚಿಯನ್ನುಂಟು ಮಾಡಲು ಸಾಹಿತ್ಯರಂಗಕ್ಕಿಳಿದುವುಗಳು. ಇಂಥ ಅಭಿರುಚಿಯನ್ನವು ಉದ್ರೇಕಿಸಿವೆ : ನೆಲೆ ನಿಲ್ಲಿಸಿವೆ——ಆಧುನಿಕ ಕನ್ನಡ ಸಾಹಿತ್ಯದ ಚರಿತ್ರೆಯಲ್ಲಿ ಅವರ ಕಾವ್ಯಗಳಿಗೆ ಸಂಭಾವನಾಸ್ಥಾನವು ಇದ್ದೇ ಇದೆ."
–ಕಡೆಂಗೋಡ್ಲು ಶಂಕರಭಟ್ಟ : "ಸಂಭಾವನೆ"

ಕವಿಚಕ್ರವರ್ತಿ ರನ್ನನ ಕೃತಿರತ್ನವೆನಿಸಿದ "ಸಾಹಸಭೀಮ ವಿಜಯಂ" ಅಥವಾ 'ಗದಾಯುದ್ಧ'ವು ಅನೇಕ ನಾಟಕೀಯಾಂಶಗಳನ್ನು ಒಳಗೊಂಡ ಕಾವ್ಯ ಮಾತ್ರವಲ್ಲ, ಮೂಲದಲ್ಲಿ ರನ್ನನು ದೃಶ್ಯ ಕಾವ್ಯವನ್ನೇ ಸಂಕಲ್ಪಿಸಿದ್ದು ಅದಕ್ಕೆ ಅನುಗುಣವಾಗಿ ವಸ್ತು ವಿನ್ಯಾಸ, ಪಾತ್ರ ಸೃಷ್ಟಿ, ಸನ್ನಿವೇಶ ನಿರ್ಮಾಣಗಳನ್ನು ಮಾಡಿದ್ದಾನೆಂಬುದೂ ಕೆಲವರ ಊಹೆ. ಈ ಊಹೆಗೆ ಆಧಾರವಾಗಿ ಪ್ರಾಚೀನ ಕನ್ನಡ ಕಾವ್ಯಗಳಲ್ಲಿ ಅಪೂರ್ವವಾಗಿರುವ ವಿದೂಷಕ ಪ್ರವೇಶವು 'ಗದಾ

ಯುದ್ಧ'ದಲ್ಲಿ ಆಗಿರುವುದನ್ನೂ ಉಲ್ಲೇಖಿಸುತ್ತಾರೆ. ಈ ಊಹೆಗೆ ಇನ್ನೊಂದು ಸಮರ್ಥನೆಯಾಗಿ ಆಂಗ್ಲಕವಿ ಮಿಲ್ಟನ್ ತನ್ನ 'Paradise Lost' ಮಹಾಕಾವ್ಯವನ್ನು ಮೊದಲಿಗೆ ನಾಟಕವಾಗಿಯೇ ಸಂಕಲ್ಪಿಸಿದ್ದನೆಂಬ ಸಾಮ್ಯವನ್ನೂ ಹೇಳುತ್ತಾರೆ. ಊಹೆಯ ಮಾತು ಹೇಗಿದ್ದರೂ ರನ್ನನ ಕಾವ್ಯಕಥೆ ನಾಟಕದಂತೆ ಕಣ್ಣಿಗೆ ಕಟ್ಟುತ್ತದೆ ಎಂಬುದರಲ್ಲಿ ಎರಡು ಮಾತಿಲ್ಲ. ರನ್ನನಿಗೆ ನಿಕಟಪೂರ್ವದ ಪಂಪ ಕವಿಯ ಸಾಂಪ್ರದಾಯ ಅವನ ಮೇಲೆ ಹಾಯ್ದಿರುವಂತೆಯೇ ಸಂಸ್ಕೃತದ ಭಟ್ಟನಾರಾಯಣನ ಪ್ರಭಾವವೂ ಆಗಿದೆ ಎಂಬುದನ್ನು ಒಪ್ಪಲೇಬೇಕು. ಎಂದರೆ ಸಾಹಿತ್ಯಾಂಶಗಳಲ್ಲಿ ಪಂಪ, ನಾಟಕಾಂಶಗಳಲ್ಲಿ ಭಟ್ಟ ನಾರಾಯಣರಿಗೆ ರನ್ನನು ಉಪಕೃತನಾಗಿದ್ದಾನೆ.

ರನ್ನನ ಕಾವ್ಯ ಗರ್ಭದಲ್ಲಿ ಬಹುಕಾಲದಿಂದ ಒಂದು ನಾಟಕಶಿಶು ಅಡಗಿಕೊಂಡಿದೆ ಎಂಬುದನ್ನು, ಗುರುತಿಸಿ ಅದಕ್ಕೆ ಸುಖ ಪ್ರಸವ ಮಾಡಿಸಿದ ಹಿರಿಮೆ ಶ್ರೀ ಬಿ. ಎಂ. ಶ್ರೀಕಂಠಯ್ಯನವರದು. 'ಗದಾಯುದ್ಧ ನಾಟಕಂ' ಎಂದು ನಾಮಕರಣಗೊಂಡ ಆ ದೃಶ್ಯಕಾವ್ಯ 1925ರಲ್ಲಿ ಮೊದಲ ಸಲ, ಮೈಸೂರು ಮಹಾರಾಜ ಕಾಲೇಜಿನಲ್ಲಿ ರಂಗಪ್ರವೇಶ ಮಾಡಿತು : ಜನಪ್ರಿಯವೂ ಆಯಿತು. ಮೂಲದ ಹತ್ತು ಆಶ್ವಾಸಗಳನ್ನು 'ಐದು ರಂಗ'ಗಳಲ್ಲಿ ಅಡಕಗೊಳಿಸಿ, 576 ಪದ್ಯಗಳನ್ನು 147 ಕ್ಕೆ ಇಳಿಸಿ, ಪಾತ್ರ ಸಂಖ್ಯೆಯನ್ನು ನಾಟಕೋಚಿತವಾಗಿ ಕಡಿಮೆ ಮಾಡಿ ರನ್ನನ ಕಾವ್ಯಕ್ಕೆ ನಾಟಕ ಸಂಸ್ಕಾರವನ್ನು ನೀಡುವಲ್ಲಿ 'ಶ್ರೀ' ಯವರ ಸಫಲತೆ ಪ್ರಶ್ನಾತೀತವಾಗಿದೆ.

'ಗದಾಯುದ್ಧ ನಾಟಕಂ' ಕನ್ನಡ ನಾಟಕ ಪ್ರಪಂಚದಲ್ಲಿ ಹೊಸ ನಾಟಕಗಳೇ ವಿರಳವಾಗಿದ್ದ ಕಾಲದಲ್ಲಿ–ಹೊಸ ದಾರಿಯನ್ನೇ ತೆರೆದ ಕೃತಿ ; ಒಂದು 'ರುದ್ರ ನಾಟಕ' (Tragedy) 'ರುದ್ರನಾಟಕ'ವೆಂಬ ಪರಿಭಾಷೆ ಮತ್ತು ಆ ಬಗೆಯ ಕಾವ್ಯವೈಶಿಷ್ಟ್ಯ ಆ ಕಾಲಕ್ಕೆ ಹೊಸತು. ಗ್ರೀಕ್ ಮತ್ತು ಆಂಗ್ಲರು ರುದ್ರನಾಟಕಗಳನ್ನು ಓದಿ, ಮೆಚ್ಚಿ, ಅವಕ್ಕೆ ಮಾರು ಹೋದ 'ಶ್ರೀ' ಯವರು ಅಂತಹ ಪ್ರಯತ್ನವನ್ನು ಕನ್ನಡದಲ್ಲೂ ಏಕೆ ಮಾಡಬಾರದು ಎಂದು ಚಿಂತಿಸಿದರು. ಆ ಚಿಂತನೆ–ಪ್ರಯತ್ನಗಳ ಫಲವಾಗಿ 'ಇಂಗ್ಲಿಷ್ ಗೀತ'ಗಳಂತೆಯೇ ಒಂದು ನವೀನ ಸಾಹಿತ್ಯ ಪ್ರಕಾರ ಕನ್ನಡಕ್ಕೆ ಲಭ್ಯವಾಯಿತು. 'ಮಹಾಸತ್ವ'ನಾದ ನಾಯಕ ಅಲ್ಪದೋಷ, ವಿಧಿ ವಿಡಂಬನ, ವಿರೋಧಿಗಳ ಕಾಪಟ್ಯವೇ ಮುಂತಾದ ಕಾರಣಗಳಿಂದ ದುರ್ಮರಣ ಹೊಂದುವುದು : ಜೀವನದ ಬರ್ಬರ–ದುರ್ಭರ ಪ್ರಸಂಗಗಳ ನಿರೂಪಣದಿಂದ ಪ್ರೇಕ್ಷಕ ವರ್ಗದಲ್ಲಿ ಒಂದು ರೀತಿಯ ಭಯವನ್ನು ಉತ್ಪಾದಿಸಿ, ತನ್ಮೂಲಕ ಮನಸ್ಸಿನ ಶುದ್ಧೀಕರಣ (katharsis) ವನ್ನು ಸಾಧಿಸುವುದು ರುದ್ರನಾಟಕದ ಸ್ಥೂಲ ಲಕ್ಷಣ. ರುದ್ರನಾಟಕದ ಈ ಚೌಕಟ್ಟಿಗೆ 'ಗದಾಯುದ್ಧ'ದ ಕಥೆಯನ್ನು ಹೊಂದಿಸಿಕೊಳ್ಳುವಾಗ 'ಶ್ರೀ'ಯವರು ಮೂಲ ಕಾವ್ಯದಲ್ಲಿ ಕೆಲವು ಪರಿವರ್ತನೆಗಳನ್ನು ಮಾಡುವುದು ಅವಶ್ಯಕವಾಯಿತು. ನಾಟಕೀಕೃತ 'ಗದಾಯುದ್ಧ'ದ ಬಹಿರಂಗದ ಬಗೆಗೆ ಭಿನ್ನಾಭಿಪ್ರಾಯ ಇಲ್ಲವಾದರೂ ಈ ಪರಿವರ್ತನೆಗಳ ಔಚಿತ್ಯ-ಅನೌಚಿತ್ಯಗಳನ್ನು ಕುರಿತು ವಾದ–ವಿವಾದಗಳು ವಿಪುಲವಾಗಿಯೇ ನಡೆದಿವೆ.

ಸಂಗ್ರಹ ಎಂಬುದು ಒಂದು ಕಲೆಯಾಗಿ 'ಗದಾಯುದ್ಧ ನಾಟಕ'ದಲ್ಲಿ ಕಂಗೊಳಿಸುತ್ತಿರುವಂತೆಯೇ ಸುಂದರವಾದ ನಾಟಕ ಕಾವ್ಯದಲ್ಲಿ ಸಿಕ್ಕಿಕೊಂಡ ಇತಿಹಾಸವೆಂಬ ಕಸವನ್ನು, ಶ್ರೀಯವರು ಜೀರ್ಣಿಸಿದ ಜಾಣ್ಮೆಯನ್ನು ಕಂಡು ಮೆಚ್ಚುತ್ತೇವೆ. ಏಕೆಂದರೆ ಪಂಪನು 'ವಿಕ್ರಮಾರ್ಜುನ ವಿಜಯ'ದಲ್ಲಿ ಅರ್ಜುನ ಅರಿ ಕೇಸರಿಗಳ ಅಭೇದತ್ವವನ್ನು ಕಲ್ಪಿಸಿರುವಂತೆಯೇ ಅವನ ಗಾಢಪ್ರಭಾವಕ್ಕೆ ಒಳಗಾಗಿರುವ ರನ್ನನು 'ಸಾಹಸ ಭೀಮ ವಿಜಯ'ದಲ್ಲಿ ಭೀಮ–ತೈಲಪರನ್ನು ಅವಿನಾಭಾವದಿಂದ ಚಿತ್ರಿಸಿದ್ದಾನೆ. ಆಶ್ರಿತಕವಿಯ ಸ್ವಾಮಿಭಕ್ತಿ ಪ್ರಶಂಸನೀಯವೇ ಆದರೂ ಕಥಾನಾಯಕ ಆಶ್ರಯದಾತರ ಅದ್ವೈತವು ಆಗಾಗ ರಸಗ್ರಾಹಿಯ ಹಲ್ಲಿಗೆ ಬೆಣಚು ಕಲ್ಲಿನಂತೆ ಸಿಲುಕಿ 'ಚುಳುಕ್' ಎನ್ನಿಸುತ್ತದೆ : ಇದು ಯಾರು-ಅರ್ಜುನನೋ ಅರಿಕೇಸರಿಯೋ ? ಭೀಮನೋ ತೈಲಪನೋ ? ಎಂಬ ಭ್ರಮೆಗೆ ಒಳಪಡಿಸುತ್ತದೆ. ಆದರೆ 'ಶ್ರೀ'ಯವರ 'ಗದಾಯುದ್ಧ ನಾಟಕ'ದಲ್ಲಿ ಇಂತಹ ರಸಭಂಗಕ್ಕಾಗಲೀ ಸಂದೇಹ ಸಂಮೋಹಕ್ಕಾಗಲಿ ಅವಕಾಶವೇ ಇಲ್ಲ.

ಹೌದು, ಸಂದೇಹಕ್ಕೆ ಅವಕಾಶವಿಲ್ಲ ನಿಜ. ಆದರೆ ನಾಟಕದಲ್ಲಿ ವಿವಾದಾಸ್ಪದ ಸಂದರ್ಭವೂ ಇದೇ ಆಗಿದೆ : ನಾಟಕದ ನಾಯಕ ಯಾರು ? ಭೀಮನೋ ಕೌರವನೋ ? –ರನ್ನನ ಮೂಲ ಕಾವ್ಯದಲ್ಲೇ ಈ ಜಿಜ್ಞಾಸೆಗೆ ಅವಕಾಶವಿದೆಯೆಂದು ಕೆಲವರಿಗೆ ತೋರಿದ್ದರೂ ಒಟ್ಟಿನಲ್ಲಿ ಕವಿಯ

ಉದ್ದೇಶ ಅಲ್ಲಿ ಸುಸ್ಪಷ್ಟ. ತನ್ನ ಆಶ್ರಯದಾತನನ್ನು ರನ್ನ ಕಾವ್ಯನಾಯಕ ಭೀಮನೊಂದಿಗೆ ಸಮೀಕರಿಸುವನೇ ವಿನಾ ಪ್ರತಿನಾಯಕ ಕೌರವನೊಂದಿಗೆ ಸರ್ವಥಾ ಅಲ್ಲ. 'ಕೃತಿಗೀಶ್ವರ ಚಕ್ರವರ್ತಿ ಸಾಹಸ ಭೀಮಂ' ಎಂಬುದನ್ನು ರನ್ನ ಘಂಟಾಘೋಷವಾಗಿ ಸಾರಿದ್ದಾನೆ. ಕಾವ್ಯಶೀರ್ಷಿಕೆಯೂ 'ಸಾಹಸ ಭೀಮ ವಿಜಯಂ' ಎಂಬುದೇ ತಾನೇ? ಹಾಗಿರುತ್ತ ಗದಾಯುದ್ಧದ ನಾಯಕ ಕೌರವನೆನ್ನುವುದು ಭ್ರಮ ಮೂಲ, ಹಾಸ್ಯಾಸ್ಪದ. 'ರನ್ನನ ಕೌರವ ಮಹಾನುಭವನೇ'[1] ಎಂಬ ಚರ್ಚೆಯೂ ಹಿಂದೊಮ್ಮೆ ಭರದಿಂದ ನಡೆದಿತ್ತು. ಮೂಲತಃ ಮಹಾನುಭಾವನೆಂದರೆ ಮಹಾಶಕ್ತಿಶಾಲಿ, ಸತ್ವಸಂಪನ್ನ ಎಂಬ ಅರ್ಥವಲ್ಲದೆ ಗುಣಾಢ್ಯನಾದ ಮಹಾಪುರುಷನೆಂದಲ್ಲ. 'ಮಹಾತ್ಮ' ಎಂಬ ಪದವೂ ಈ ಅರ್ಥದಲ್ಲಿ ಪ್ರಯುಕ್ತವಾಗುತ್ತಿತ್ತು. ಪ್ರಾಚೀನ ಕಾವ್ಯಗಳಲ್ಲಿ ಪ್ರತಿ ನಾಯಕರನ್ನು–ರಾಕ್ಷಸರಂತಹ ದುಷ್ಟ ಜನರನ್ನೂ 'ಮಹಾತ್ಮ' ಎಂದು ವರ್ಣಿಸಿದುದಕ್ಕೆ ಉದಾಹರಣೆಗಳಿವೆ.[2] ಸ್ಮಶಾನ ಕುರುಕ್ಷೇತ್ರದಲ್ಲಿ ಸಂಜಯ ಸಮೇತನಾಗಿ ಸಂಚರಿಸುವ ಕೌರವನ ದುಃಯೋದ್ಗಾರ ಅದರಲ್ಲೂ ಅಭಿಮನ್ಯುವಿನ ಮೃತ ದೇಹವನ್ನು ಕುರಿತ ಅವನ ಗುಣ ವರ್ಣನೆ ಮಾಡುವ ಔದಾರ್ಯ, ವೈಶಂಪಾಯನ ತೀರದಲ್ಲಿ ಮೊತ್ತ ಮೊದಲ ಸಲ ಭೀಮ ವಿಷಯಕವಾಗಿ ತೋರುವ ಧರ್ಮಬುದ್ಧಿಗಳೆಲ್ಲ ಅವನ ಬಗ್ಗೆ ನಮ್ಮಲ್ಲಿ ಆದರ–ಅನುಕಂಪಗಳನ್ನು ಹುಟ್ಟಿಸುತ್ತವೆ. ಹಾಗೆಯೇ ಭೀಮನು ಕೌರವನ ಊರುಭಂಗ–ಮಕುಟಭಂಗ ಮಾಡಿದ್ದು ಧರ್ಮವಿರೋಧಿ ಕೃತ್ಯವೆಂದೂ ಮೇಲ್ನೋಟಕ್ಕೆ ತೋರುವುದಿದೆ. ಕೌರವನ ಪೂರ್ವ ವೃತ್ತಾಂತದೊಂದಿಗೆ ಮೈತ್ರೇಯ ಶಾಪ, ಗಾಂಧಾರೀ ವರದಾನ, ಭೀಮ ಪ್ರತಿಜ್ಞೆ–ಈ ಮೂರನ್ನು ನೆನೆದುಕೊಂಡರೆ ಕೌರವನಿಗೆ ಒದಗಿದ ಪರಾಭವ-ಪರಿಭವಗಳು ಸ್ವಯಂಕೃತ ಮತ್ತು ಅನಿವಾರ್ಯ. ಅವನು ಬಿತ್ತಿ ಬೆಳೆಯಿಸಿದ ವೈರ ವೃಕ್ಷದ ವಿಷಫಲವನ್ನು ಅವನೇ ಉಣ್ಣುವಂತಾಯಿತು. ಅಷ್ಟರ ಮೇಲೂ ವಾಲ್ಮೀಕಿ ಸಮೇತನಾಗಿ ಯಾವ ಪ್ರಾಚೀನ ಮಹಾ ಕವಿಯೂ ಸಂಪೂರ್ಣ ದೋಷರಹಿತ, ಟೀಕಾಬಾಹ್ಯ ಪರಿಪೂರ್ಣ ಪಾತ್ರಗಳನ್ನು ಚಿತ್ರಿಸಿಲ್ಲ ಎಂಬುದನ್ನು ಮರೆಯಬಾರದು. ರನ್ನನೂ ಇದಕ್ಕೆ ಅಪವಾದವಲ್ಲ, ಆದರೂ ಅವನು ಭೀಮ ಪಕ್ಷಪಾತಿ ಎಂಬುದಕ್ಕೆ ಅವನ ಕಾವ್ಯವೇ ಪರಮ ಪ್ರಮಾಣ.

ನಾಟಕದಲ್ಲಿ ವ್ಯಕ್ತವಾಗುವಂತೆ 'ಶ್ರೀ'ಯವರ ದೃಷ್ಟಿ–ಪಕ್ಷಪಾತಗಳೆಲ್ಲ ಕೌರವನ ಕಡೆಗೇ. ಮೂಲ ಕಾವ್ಯದ ಭೀಮ ನಾಟಕದ ಭೀಮನಿಗಿಂತ ವಿನಯವಂತ. ಧರ್ಮಪರ. ಆದರೆ ವಾಚಕರ (ಅಥವಾ ಪ್ರೇಕ್ಷಕರ) ಒಲವು ಕೌರವನ ಕಡೆಗೇ ಹರಿಯುವಂತೆ 'ಶ್ರೀ'ಯವರು ಕ್ರಿಯಾ ಸಂದರ್ಭಗಳನ್ನು ನಿರ್ಮಿಸಿದ್ದಾರೆ, ಸಂಭಾಷಣೆಗಳನ್ನು ಸಂಯೋಜಿಸಿದ್ದಾರೆ. ನಾಟಕದಲ್ಲಿ ಕೌರವನ ಪ್ರವೇಶ ಸಂದರ್ಭಗಳೂ ಭೀಮನದಕ್ಕಿಂತ ಕಡಿಮೆ. ಗದಾಯುದ್ಧ, ಕೌರವಾವಸಾನಗಳೊಂದಿಗೆ ನಾಟಕವೂ ಮುಗಿಯುವುದರಿಂದ ಮೂಲಕಾವ್ಯದ ಭೀಮ ಪಟ್ಟಾಭಿಷೇಕದ ವೈಭವವೂ ಇಲ್ಲ. ಬದಲಿಗೆ, "ವಿಜಯೋನ್ಮತ್ತರಿವರ್ ಕಾಣರ್, ನಾನ್ ಕಾಣ್ಬೆಂ, ಭೀಮನೆ ತಲೆಯ ಮೇಲಾಡುವ ಘೋರ ಮೂರ್ತಿಗಳು" ಎಂದು ಯುಧಿಷ್ಠಿರನ ಧರ್ಮದೃಷ್ಟಿಗೆ ಕಾಣಿಸಿ, "ಮಹಾಪಾಪಂ ಭ್ರಾತೃ ಹತ್ಯಂ" ಎಂದೂ ಅವನ ಬಾಯಿಂದ ಆಡಿಸಿದ್ದಾನೆ. (ಇಲ್ಲಿರುವ 'ಘೋರ ಮೂರ್ತಿಗಳು' ಗ್ರೀಕ್ ರುದ್ರ ನಾಟಕಗಳ Fweis ಗೆ ಸಮಾನ) ಅಂತ್ಯ ಕಾಲದಲ್ಲಿ ಕೌರವನು 'ಎಲ್ಲವೂ ಹರಿಮಾಯೆ'ಯೆಂದು ತಿಳಿದು ಸಮಚಿತ್ತನಾಗಿ, ಶಾಂತನಾಗಿ ದೇಹತ್ಯಾಗ ಮಾಡಿದ ಎಂಬ ಸಾಂತ್ವನ-ಸೂಚನೆಗಳು ನಾಟಕದಲ್ಲಿವೆ. 'ನೊಂದ ಜೀವಂ ತಣ್ಣಗಾಯ್ತು. ಮಹಾನುಭಾವ ನಿನಗೆ ಸುಗತಿಯಕ್ಕೆ' ಎಂದು ಅಶ್ವತ್ಥಾಮನಿಂದ ಆಡಿಸುವ ಮಾತು 'ಶ್ರೀ' ಭಾವಕ್ಕೊಂದು ಭಾಷ್ಯದಂತಿದೆ.

'ಶ್ರೀ'ಯವರ ದುರಂತ ನಾಯಕ ಕಲ್ಪನೆ ಕೆಲವು ತೊಡಕುಗಳಿಗೆ ಕಾರಣವಾಗಿದೆ. ಪಾಶ್ಚಾತ್ಯ ರುದ್ರ ನಾಟಕಗಳ ನಾಯಕ ಭಾರತೀಯ ನಾಟಕಗಳಲ್ಲಿರುವಂತೆ 'ಉದಾತ್ತ'ನಾಗಬೇಕಿಲ್ಲ. (ಉದಾ-ಈಡಿಪಸ್, ಆಯಾಸ್, ಮ್ಯಾಕ್ಬೆತ್, ಒಥೆಲೋ, ಸೀಸರ್ ಇತ್ಯಾದಿ. ಇವರೆಲ್ಲ ಪಾಪಪೀಡಿತರು, ಅಸೂಯಾಗ್ರಸ್ತರು, ಮಹತ್ವಾಕಾಂಕ್ಷಿಗಳು) ಕಥಾನಾಯಕ ಧೀರೋದಾತ್ತನಾದರೆ ಪ್ರತಿನಾಯಕ 'ಧೀರ ಉದ್ಧತ' ಎಂದರೆ ನಾಯಕನ ವಿರುದ್ಧಗುಣ ಪ್ರತಿನಾಯಕನದು. (ಖಳನಾಯಕ ಎಂಬ ಪ್ರಯೋಗ ಇತ್ತೀಚೆಯದು.) ಪ್ರಾಚೀನ ಸಂಸ್ಕೃತ ನಾಟಕಗಳಲ್ಲಿ ಧೀರಶಾಂತ (ಉದಾ–ಚಾರುದತ್ತ) ಧೀರ ಲಲಿತ (ವತ್ಸರಾಜ) ರು 'ನಾಯಕ'ರಾದ ಉದಾಹರಣೆಗಳಿವೆ ವಿನಾ ಧೀರ ಉದ್ಧತರಲ್ಲ. ಭಾರತೀಯತ್ವಕ್ಕೆ–ಧರ್ಮ ಶ್ರದ್ಧೆಗಳೇ ಇದಕ್ಕೆ ಕಾರಣ. ವ್ಯಾಸಕೃತ ಮಹಾಭಾರತದಲ್ಲಿ ದುರ್ಯೋ

ಧನ ಪ್ರತಿನಾಯಕ. ಕನ್ನಡದ ಪಂಪ–ರನ್ನರಲ್ಲೂ ನಾವು ಕಾಣುವುದು ಹೆಚ್ಚು ಕಡಿಮೆ ಅದರದೇ ಪಡಿಯಚ್ಚು. (ರನ್ನನ ಕೌರವನಲ್ಲಿರುವ 'ಒಳ್ಳೆಯತನ'ಕ್ಕೆ, ಕಥಾ ಸಂದರ್ಭವೇ ಕಾರಣ ಎಂಬುದನ್ನು ಹಿಂದೆ ಹೇಳಿದೆ.) ಎಂದರೆ ಕೌರವ ಚಿತ್ರಣದಲ್ಲಿ ವ್ಯಾಸರೇ ನಮಗೆ ಪ್ರಮಾಣ. ಯಾವುದೇ ಒಂದು ಪೌರಾಣಿಕ ವ್ಯಕ್ತಿಯನ್ನು ಮೂಲ ಕವಿಯ ಕಲ್ಪನೆ ಮತ್ತು ಕಥಾಸಂದರ್ಭಗಳಿಂದ ಪ್ರತ್ಯೇಕಿಸಿ, ಪರಿವರ್ತಿಸಿ ವಿವರಿಸಿದಾಗ ಕಾವ್ಯ–ನಾಟಕಗಳ ಒಟ್ಟು ಶಿಲ್ಪ ಅಂದಗೆಡುತ್ತದೆ. ಭಾಸಕಾಳಿದಾಸಾದಿಗಳು ಇಂತಹ ಪರಿವರ್ತನೆಗಳನ್ನು ಮಾಡಿರುವರಾದರೂ. ಅವರು ಅದಕ್ಕಾಗಿ ಅನುಸರಿಸುವ ಮಾರ್ಗವೇ ಬೇರೆ. ಅವರು ದುಷ್ಟರನ್ನು ಶಿಷ್ಟರನ್ನಾಗಿ ಚಿತ್ರಿಸಿರಬಹುದೇ ವಿನಾ ಶಿಷ್ಟರಲ್ಲಿ ದೌಷ್ಟ್ಯವನ್ನು ಆರೋಪಿಸುವುದಿಲ್ಲ. ಅವರ ಪ್ರಾಧಾನ್ಯವನ್ನು ತಗ್ಗಿಸುವುದೂ ಇಲ್ಲ. ಆದರೆ 'ಶ್ರೀ'ಯವರ ನಾಟಕದಲ್ಲಿ ಕೌರವ ಶಿಷ್ಟನಾಗಿದ್ದಾನೆ : ಭೀಮ-ದುಷ್ಟ ಎನ್ನಲಾಗದಿದ್ದರೂ—ಅವನದು ಊನ ಕಾಂತಿ.

ರನ್ನನ ಕಾವ್ಯದಲ್ಲೇ ಭೀಮನಿಗಿಂತ ಕೌರವನಿಗೆ ಪ್ರಾಶಸ್ತ್ಯ ಹೆಚ್ಚು ಎಂದುಕೊಂಡು 'ಶ್ರೀ'ಯವರ ಬದಲಾವಣೆಯನ್ನು ಸಮರ್ಥಿಸುವುದೂ ಸಮಂಜಸವೆನ್ನಿಸದು. ಪ್ರತಿ ನಾಯಕನ ಬಲ ವೀರ್ಯಾದಿ ಗುಣಗಳನ್ನು ನಾಯಕನದಕ್ಕಿಂತ ಅತಿಶಯವಾಗಿ ಚಿತ್ರಿಸಿ, ಅಂತಹವನನ್ನು ಕಾವ್ಯ ನಾಯಕ ಗೆದ್ದನೆಂದೋ ಕೊಂದನೆಂದೋ ವರ್ಣಿಸುವುದು ಪ್ರಾಚೀನ ಕಾವ್ಯಗಳಲ್ಲಿ ಒಂದು ರೀತಿಯಾಗಿದೆ.[3] ಕಾವ್ಯದಲ್ಲಿ ನಾಯಕನಿಗಿಂತ ಪ್ರತಿನಾಯಕನ ಪ್ರಸ್ತಾಪ ಹೆಚ್ಚಾಗಿ ಬಂದಿದೆ ಎಂಬುದರಿಂದ ನಾಯಕ ಗೌಣ, ಪ್ರತಿನಾಯಕ ಮುಖ್ಯ ಎಂದೂ ಹೇಳುವಂತಿಲ್ಲ. ಏಳು ಅಂಕಗಳ 'ಶಾಕುಂತಲ'ದಲ್ಲಿ ಶಕುಂತಲೆ ಆಡುವ ಮಾತುಗಳನ್ನು ಸಂಗ್ರಹಿಸಿದರೆ ನಾಲ್ಕು ಪುಟವೂ ಆಗಲಾರದು. ಎಂದರೆ ಆಕೆ ಕಥಾನಾಯಿಕೆ ಅಲ್ಲವೆನ್ನಬಹುದೇ ? ಹೆಚ್ಚು ಸಲ ರಂಗದಲ್ಲಿ ಮೆರೆಯುವವರೂ ಮೊರೆಯುವವರೂ ನಾಯಕ-ನಾಯಿಕೆಯಾಗಿರಬೇಕಿಲ್ಲ.

ಕೌರವನನ್ನು 'ಮಾನಧನ' ಎಂದು ವರ್ಣಿಸುವುದುಂಟು. ಕೌರವನ 'ಮಾನ' ವೆಂದರೆ 'ಅಭಿಮಾನ' ಅಹಂಕಾರದ ಇನ್ನೊಂದು ರೂಪವೇ ಅಭಿಮಾನ. (ಕಾಲಾಂತರದಲ್ಲಿ ಅಭಿಮಾನ ಪದದ ಅರ್ಥ ಬದಲಾಗಿ 'ಆತ್ಮಸಂಮಾನ' ಎಂದಾಗಿ ಬಿಟ್ಟಿದೆ.) 'ಶ್ರೀ' ಯವರ ನಾಟಕದಲ್ಲೂ ಊರುಭಂಗಿತನಾದ ಕೌರವ, "ಮಾನಭಂಗಂ! ಮಾನಭಂಗಂ !" ಎಂದು ನರಳುತ್ತಾನೆ. ಆದರೆ ಈ 'ಮಾನ' ಯಾವುದು ? ಭೀಮನು ಮಾಡಿದ ಊರುಭಂಗ, ಕಿರೀಟ ಭಂಗಗಳಿಂದ ಆದದ್ದೇ ಈ ಮಾನಭಂಗ ? ಪಾಂಡವರನ್ನು, ಪಾಂಚಾಲಿ ಯನ್ನು, ಪರಮಾತ್ಮ ಶ್ರೀ ಕೃಷ್ಣನನ್ನು ಅದೆಷ್ಟು ಸಲ, ಯಾನ ಯಾವ ರೀತಿಯಲ್ಲಿ ಪ್ರಾಣಭಂಗ-ಮಾನಭಂಗಗೊಳಿಸಲು ಕೌರವನು ಪ್ರಯತ್ನಿಸಿದ ಎಂಬುದನ್ನು ಕಡೆಗಣಿಸಿ, ಗದಾಯುದ್ಧದ ಅಂತ್ಯದ ಅನಿವಾರ್ಯ ಸಂದರ್ಭವೊಂದನ್ನೇ ಹಿಡಿದು ವಾದಿಸಿ, ಕೌರವನು 'ಸಮಾನಧನ' ಎಂದು ಸಾಧಿಸುವುದು ಮಹಾಭಾರತದ ಮೂಲ ಕಲ್ಪನೆಗೆ ಅನುರೂಪವೂ ಅಲ್ಲ, ನ್ಯಾಯಸಮ್ಮತವೂ ಅಲ್ಲ. ಕೌರವ ತನ್ನವರಿಗೆ ಒಳ್ಳೆಯವನಾಗಿದ್ದ ಎಂಬುದರಿಂದಲೇ ಆತ ಸಭ್ಯ, ಶಿಷ್ಟ ಎನ್ನಿಸಲಾರ. ಕಂಟಕರಾದ ರಾಕ್ಷಸರೂ ಸಹ ಬಂಧು ಜನದೊಂದಿಗೆ ಸ್ನೇಹಪರರೂ, ವಾತ್ಸಲ್ಯಮಯಿಗಳೂ ಆಗಿದ್ದುದಕ್ಕೆ ವಿಪುಲ ನಿದರ್ಶನಗಳಿವೆ.

ಹೀಗೆ, ನಾಟಕದಲ್ಲಿ ಭೀಮ-ಕೌರವರ ಪಾತ್ರಸೃಷ್ಟಿ ಅನುಲಕ್ಷಿಸಿದಾಗ 'ಶ್ರೀ' ಯವರ ದೃಷ್ಟಿ–ಧೋರಣೆಗಳನ್ನು ಒಪ್ಪುವುದು ಸ್ವಲ್ಪ ಕಷ್ಟವಾಗುತ್ತದೆ. ಆದರೂ ಮೊದಲೇ ಹೇಳಿದಂತೆ 'ಗದಾಯುದ್ಧ ನಾಟಕ' ವು ಕನ್ನಡ ನಾಟಕ ಕ್ಷೇತ್ರದಲ್ಲಿ ಒಂದು ಹೊಸಬೆಳೆ ಎಂಬುದನ್ನು ಮನ್ನಿಸಲೇ ಬೇಕಾಗುತ್ತದೆ. ಪ್ರಾಚೀನ ಕಾವ್ಯಗಳ 'ದುರಂತ'–ಖಳ ಪಾತ್ರಗಳನ್ನು ಸಹಾನುಭೂತಿಯಿಂದ ನೋಡಿ ಚಿತ್ರಿಸುವ ಒಂದು ನವೀನ ಪರಂಪರೆಗೆ 'ಶ್ರೀ' ಯವರೇ ತಲೆಯಾಳು. ಕಾಲಕ್ರಮೇಣ 'ಶ್ರೀ' ಯವರ ಅಚ್ಚಿನಲ್ಲೇ ದುರಂತ ನಾಟಕ, ದುರಂತ ಕರ್ಣ, ದುರಂತ ಕೀಚಕ, ದುರಂತ ಹಿರಣ್ಯಕಶಿಪು ಮುಂತಾದವರ ಎರಕವೂ ಆಯಿತೆಂಬುದನ್ನು ಮರೆಯುವಂತಿಲ್ಲ.

ಪಾತ್ರವಿಷಯವನ್ನು ಬಿಟ್ಟು ಉಳಿದ ಪರಿವರ್ತನೆಗಳ ದೃಷ್ಟಿಯಿಂದ 'ಗದಾಯುದ್ಧ ನಾಟಕ' ವು ಸ್ಪೃಹಣೀಯವಾಗಿಯೇ ಇದೆ. ಕಾವ್ಯದ ಮರುಳಗಳ ಸಂಖ್ಯೆಯನ್ನು ನಾಟಕದಲ್ಲಿ ಮೂರಕ್ಕೆ ಮಿತಿಗೊಳಿಸಿ ಅವಕ್ಕೆ ಸ್ತ್ರೀತ್ವವನ್ನು ಕಲ್ಪಿಸಿರುವುದು. (ಇದು ಶೇಕ್ಸ್‌ಪಿಯರನ 'ಮ್ಯಾಕ್‌ಬೆತ್' ನಾಟಕದ ಮೂವರು ಯಕ್ಷಣಿ–witches ಯವರನ್ನು ನೆನಪಿಗೆ ತರುತ್ತದೆ.) ವಿದೂಷಕನ ಮಾತುಗಳನ್ನು ಕೃಷ್ಣನ ಬಾಯಲ್ಲಿ ಆಡಿಸುವುದು ('ದೇವಾಸುರ ಯುದ್ಧಕೆ

ಕರಗಂಬೊತ್ತ—³) ಕೌರವನು ಏಕಾಂಗ ವೀರ–ಪ್ರತಿಕೂಲ ದೈವಿ ಎಂಬುದನ್ನು ತೋರುವುದಕ್ಕಾಗಿ ಹಲಾಯುಧನ ಪ್ರವೇಶ ಪ್ರಸ್ತಾಪವನ್ನೇ ಮಾಡದಿರುವುದು – ಇವೆಲ್ಲ ರೋಚಕವಾಗಿವೆ. ಹಾಗೆಯೇ ಕೌರವನ ಘನತೆಯನ್ನು ಎತ್ತಿ ಹಿಡಿಯುವುದಕ್ಕಾಗಿ ಅವನ ಭೀಮವೈರ–ಕೃಷ್ಣ ವೈರಗಳನ್ನು ಕೇವಲ ಸೂಚಿಸಿ ಬಿಟ್ಟಿದ್ದಾರೆ. ಆದರೆ ಕಥಾ ಸಂದರ್ಭಕ್ಕೆ ಯಾವುದೇ ರೀತಿಯಲ್ಲೂ ಪರಿಪೋಷಕವಾಗ ದಿರುವ ಅಶ್ವತ್ಥಾಮ ಪ್ರಸಂಗವನ್ನು 'ಶ್ರೀ' ಯವರು ಬಿಟ್ಟೇ ಬಿಡುತ್ತಿದ್ದರೆ ನಾಟಕದ ಅಂತ್ಯವು ಇನ್ನಷ್ಟು ಕಲಾತ್ಮಕವಾಗುತಿತ್ತು ಎಂಬ ಅಭಿಪ್ರಾಯವು ಸಾಧು ವಾದದ್ದೇ. ಗ್ರೀಕ್ ನಾಟಕಗಳಲ್ಲಿರುವಂತೆ ಕಾಲ, ಕ್ರಿಯೆ ಮತ್ತು ಸ್ಥಳ 'ತ್ರಿಮಿತಿ' (the three unites)ಯನ್ನು 'ಗದಾಯುದ್ಧ'ದಲ್ಲೂ 'ಶ್ರೀ' ಯವರು ಯಥೋ ಚಿತವಾಗಿ ಪಾಲಿಸಿ ಸಫಲರಾಗಿದ್ದಾರೆ.

ಮೂಲ ಕಾವ್ಯದ ಕೆಲವು ಪದ-ಪಂಕ್ತಿಗಳನ್ನು 'ಶ್ರೀ' ಯವರು ಸಾಂದರ್ಭಿಕವಾಗಿ ಬದಲಾಯಿಸುಮದು ನಾಟಕಕ್ಕೆ ಇನ್ನಷ್ಟು ಪುಷ್ಟಿಯನ್ನು ನೀಡುತ್ತದೆ:

ಎಂಪು ನೊಂದು ನುಡಿಯೆ–ನೊಂದು ನುಡಿಪಳ್ ತಂಗೆ
ಎಂಪು ಪಶ್ಚಾತ್ತಾಪಂಗೆಯ್ದು–ಪ್ರಿಯಮನಗೆ ಈ ಪಶ್ಚಾತ್ತಾಪಂ
ಅನಾರ್ಯಂಗ ಹಿಕೇತನಂಗೆ_ಅಕಾರ್ಯಂಗ ಹಿಕೇತನಂಗೆ
ಎನಗಹಿತರೊಡನೆ ಪುದುವಾಳೆನೆ ನೊಂದೆಂ–ಎನಗೆ ತಲೆಗೆರೆದು ನೀರೊಳ್–ಇತ್ಯಾದಿ.

ಪದ್ಯ–ಪದ್ಯಗಳ ನಡುವೆ 'ಶ್ರೀ' ಯವರದೇ ಕೆಲವು ಸಣ್ಣ ದೊಡ್ಡ ಗದ್ಯವಾಕ್ಯಗಳೂ, ಪಾತ್ರ-ಪ್ರಸಂಗತಿಗಳಿಗೆ ಹೊಂದಿಕೊಂಡು ಬಂದದ್ದಿದೆ :

'ಎನ್ನ ಆರಾಧನೆಯ ಶಕ್ತಿ ಇವಳ್'
'ನಡೆ ಭೀಮನಂ ತೋರು'
ಮಹಾರಾಜ, ಇತ್ತ ಬಾರದಿರ್, ಬಾರದಿರ್'
'ವಿಜಯೋನ್ಮತ್ತರಿವರ್ ಕಾಣರ್, ನಾ ಕಾಣ್ಬೆಂ ..'
'ಇವೆಲ್ಲ ಕೃಷ್ಣನ ಮಾಯೆ ! ..ದೈವದ ಮುಂದೆ ನಾವಲ್ತು.
'ನೊಂದ ಜೀವಂ ತಣ್ಣಗಾಯ್ತು ...'

ಪ್ರಾಚೀನ ಯುದ್ಧರಂಗದ ಒಂದು ಕಥೆಯನ್ನು ಆಧುನಿಕ ರಂಗಭೂಮಿಗೆ ಅಳವಡಿಸುವುದು ಪ್ರಯಾಸದ ಕಾರ್ಯ. ಇದನ್ನು 'ಶ್ರೀ' ಯವರು ರಂಗತಂತ್ರಕ್ಕೆ ಚ್ಯುತಿ ಬಾರದಂತೆ ಕುಶಲತೆಯಿಂದ ಸಾಧಿಸಿದ್ದಾರೆ. ರನ್ನನ ಗಂಡು ನುಡಿಯ ಬಿಗಿಯನ್ನೂ ಹೊಗರನ್ನೂ ಯಥಾಸಾಧ್ಯ ಉಳಿಸಿಕೊಂಡು ಮಿತಾವಕಾಶದಲ್ಲಿ 'ಗದಾಯುದ್ಧ'ದ ಕಥೆಯನ್ನು ಕಣ್ಣಿಗೆ ಕಟ್ಟಿಸಿದ 'ಶ್ರೀ' ಉದ್ಯಮವು ಶ್ಲಾಘನೀಯವೂ ಅವಿಸ್ಮರಣೀಯವೂ ಆಗಿದೆ.

---

೧) "ಕೊಳ್ ನಿನ್ನ ನೆಚ್ಚಿನ ಪಾಂಡವರ ತಲೆಗಳಿವೆಯೆಂದು ದುರ್ಯೋಧನನ ಮುಂದಿಕ್ಕಿದೊಡೆ ಮಹಾನುಭಾವನಾ ತಲೆಗಳಂ ನೀಡು ಭಾವಿಸಿ ನೋಡಿ"–ಗ. ಯು : ನವಮಾಶ್ವಾಸ.

೨) ವಿರರಾಜ ಗದಾಪಾಣಿಃ ಕುಬೇರ ಇವ ಸಂಯುಗೇ !
ಪ್ರತಸ್ಥಿರೇ ಮಹಾತ್ಮಾನೋ ಬಲೈರಪ್ರತಿಮೈರ್ವೃತಾಃ ||–ರಾಮಾಯಣಃ ಯುದ್ಧಕಾಂಡ–ಸರ್ಗ ೬೯, ಶ್ಲೋಕ ೩೩

೩) ನಮ್ಮ ಯಕ್ಷಗಾನ ಬಯಲಾಟಗಳಲ್ಲಿ ಸಾತ್ವಿಕ ವ್ಯಕ್ತಿತ್ವದ ನಾಯಕನಿಗಿಂತ ರಾಜಸ–ತಾಮಸ ಸ್ವಭಾವದ ಪ್ರತಿನಾಯಕರಿಗೇ ಹೆಚ್ಚು ವೇಷಭೂಷಣಗಳು ; ಅಬ್ಬರ ಆಡಂಬರಗಳು.

# 'ಶ್ರೀ' ಅವರ ಸಮಕಾಲೀನ ಕನ್ನಡ ವಿಮರ್ಶಾ ಪರಿಸರ ಮತ್ತು 'ಶ್ರೀ' ಅವರ 'ಸಮಕಾಲೀನ ಸಾಹಿತ್ಯ ವಿಮರ್ಶೆ'

ಶ್ರೀಮತಿ ಪ್ರೀತಿ ಶುಭಚಂದ್ರ

ಲೇಖಕನೊಬ್ಬನ ವಿಮರ್ಶೆಯನ್ನು ಆತನ ಸಮಕಾಲೀನ ಸೃಜನ ಹಾಗೂ ವಿಮರ್ಶನ ಚಟುವಟಿಕೆಗಳ ಹಿನ್ನೆಲೆಯಲ್ಲಿ ವಿಮರ್ಶಿಸುವುದರಿಂದ 'ವಿಮರ್ಶೆಯ ವಿಮರ್ಶೆ'ಯು ತನ್ನ ಮಿತಿಗಳನ್ನು ಮೀರಬಹುದು. ಆಧುನಿಕ ಕನ್ನಡ ವಿಮರ್ಶಾ ಕಾರ್ಯವನ್ನು ಕುರಿತ ವಿಮರ್ಶೆಗಳಲ್ಲಿ ಇಂತಹ ಮೀರಲಾರದ ಮಿತಿಗಳು ಸಾಮಾನ್ಯವಾಗಿ ಇವೆ. ಸ್ಪಷ್ಟೀಕರಣಕ್ಕಾಗಿ, ಎಂ. ಜಿ. ಕೆ. ಮತ್ತು ಕುರ್ತಕೋಟಿಯವರು ನವೋದಯ ವಿಮರ್ಶಕರ ಬಗೆಗೆ ಬರೆದ ಲೇಖನಗಳನ್ನು ಉದಾಹರಿಸಬಹುದು. ನವೋದಯದ ಪ್ರಮುಖ ವಿಮರ್ಶಕರ ವಿಮರ್ಶೆಯನ್ನು ಇತಿ–ಮಿತಿಗಳ ನೆಲೆಯಲ್ಲಿ ವಿಶ್ಲೇಷಿಸಿರುವ ಇವರಿಬ್ಬರ ವಿಮರ್ಶೆಯಲ್ಲಿ ಒಂದು ಮೂಲಭೂತ ಕೊರತೆ ಇದೆ. ಈ ಕೊರತೆಯ ಸ್ವರೂಪವನ್ನು ಸಂಕ್ಷಿಪ್ತವಾಗಿ ಪ್ರಸ್ತಾಪಿಸುವುದರ ಮೂಲಕ 'ಶ್ರೀ' ಅವರ 'ಸಮಕಾಲೀನ ಸಾಹಿತ್ಯ ವಿಮರ್ಶೆ'ಯನ್ನು ಅವರ ಸಮಕಾಲೀನ ಸಾಹಿತ್ಯಿಕ ಹಿನ್ನೆಲೆಯಲ್ಲಿ ವಿವೇಚಿಸುವುದರ ಅಗತ್ಯವನ್ನು ಸ್ಪಷ್ಟಪಡಿಸುತ್ತೇನೆ.

ಪುಸ್ತಕ ಸಾಮಗ್ರಿ ದೊರಕದ ಕಾರಣ, ಎಂ. ಜಿ. ಕೆ. ಯವರು ಸ್ವಾತಂತ್ರ್ಯಪೂರ್ವ ವಿಮರ್ಶೆಯ ಧಾಟಿಧೋರಣೆಗಳನ್ನು ವಿಮರ್ಶಕರ ವಿಮರ್ಶೆಯ ಆಧಾರದ ಮೇಲೆ ಮಾಡಿಕೊಡುವುದಾಗಿ ಹೇಳಿದ್ದಾರೆ.[1] ಎಂ. ಜಿ. ಕೆ.ಯವರಂತೆ ಕುರ್ತಕೋಟಿಯವರೂ ವಿಮರ್ಶಕರ ಪ್ರತ್ಯೇಕ ಚರ್ಚೆಯನ್ನೇ ತಮ್ಮ ಲೇಖನದಲ್ಲಿ ಪ್ರಧಾನವಾಗಿರಿಸಿಕೊಂಡಿದ್ದಾರೆ. ಇದು ಇವರಿಬ್ಬರ ಲೇಖನದ ಸ್ವರೂಪಕ್ಕೆ



ಸಂಬಂಧಿಸಿದ್ದು. ವಿಮರ್ಶಕರ ಇತಿ–ಮಿತಿಗಳನ್ನು ಖಚಿತವಾಗಿ ಗುರುತಿಸುವಲ್ಲಿ ಈ ವಿಧಾನ ಸಹಾಯಕವಾಗುತ್ತದೆ. ಆದರೆ, ಈ ಇತಿ–ಮಿತಿಯ ಕಾರ್ಯ–ಕಾರಣ ಸಂಬಂಧವನ್ನು ಸಮಕಾಲೀನ ಸಾಹಿತ್ಯ ಪರಿಸರದ ವಿಶ್ಲೇಷಣೆಯ ಮೂಲಕ ಅನ್ವೇಷಿಸುವ, ಅರ್ಥೈಸುವ ಕಾರ್ಯ ನಡೆಯದಾಗುತ್ತದೆ. ಎಂ. ಜಿ. ಕೆ., ಕುರ್ತುಕೋಟಿ ಹಾಗೂ ಇತರ ಹಲವಾರು ವಿಮರ್ಶಕರಲ್ಲಿ ಒಟ್ಟಾರೆಯಾಗಿ, ನವೋದಯ ಸಾಹಿತ್ಯ ಪರಿಸರದ ಬಗೆಗೆ ಅರ್ಥಪೂರ್ಣ ಗ್ರಹಿಕೆ ಕಂಡು ಬರುತ್ತದೆ. ಆದರೆ ಈ ಗ್ರಹಿಕೆಯ ಎಳೆಗಳನ್ನು ಅಗತ್ಯವಿರುವೆಡೆ ವಿಸ್ತರಿಸದೆ, ಮುಡಿಸಿಕೊಳ್ಳದಿರುವ ಕಾರಣ ನವೋದಯ ವಿಮರ್ಶಕರ ಪ್ರತ್ಯೇಕ ಚರ್ಚೆಯಲ್ಲಿ ಸರಳೀಕೃತ ತೀರ್ಮಾನಗಳು ಹೊರಬರುತ್ತವೆ. "ಹೊಸಗನ್ನಡಕ್ಕೆ—ಪ್ರಾತಿನಿಧಿಕ ವಿಮರ್ಶಕನಿಲ್ಲ". "ವಿಮರ್ಶಾ ಸಂಪ್ರದಾಯ ಬೆಳೆಯಲಿಲ್ಲ", "ನವೋದಯ ವಿಮರ್ಶಕರು ಸಾಹಿತ್ಯ ಕೃತಿಗಳ ಮೌಲ್ಯ ನಿರ್ಣಯ ಮಾಡುವಲ್ಲಿ ಜಯಶಾಲಿಗಳಾಗಲಿಲ್ಲ". 'ಸಮಕಾಲೀನ ಕೃತಿಗಳ ವಿಮರ್ಶೆಯ ಭಾಗ ಬೀಳಾಯಿತು'—ಇಂತಹ ತೀರ್ಮಾನಗಳು ಕೇವಲ ತೀರ್ಮಾನಗಳೇ ಆಗಿ ಉಳಿದಿವೆ. ನವೋದಯದಲ್ಲಿ ಪ್ರಾತಿನಿಧಿಕ ವಿಮರ್ಶಕರೇಕಿಲ್ಲ ? ವಿಮರ್ಶಾ ಸಂಪ್ರದಾಯವೇಕೆ ಬೆಳೆಯಲಿಲ್ಲ ? ಸಮಕಾಲೀನ ವಿಮರ್ಶೆ ಬೀಳಾಯಿತೆ ? ಏಕೆ ? —ಇಂತಹ ಪ್ರಶ್ನೆಗಳನ್ನು ಎತ್ತಿ, ಉತ್ತರಿಸುವ ಯತ್ನ ನಡೆದಾಗ ಮಾತ್ರ ತೀರ್ಮಾನಗಳ ಹಂತವನ್ನು ಮೀರಬಹುದು. ಇದಿನ್ನೂ ವಿವರವಾಗಿ ನಡೆಯಬೇಕಾಗಿದೆ. ಇಂತಹ ಕೆಲವು ಎತ್ತಬಹುದಾದ ಪ್ರಶ್ನೆಗಳನ್ನು ಮುಂದಿರಿಸಿಕೊಂಡು, 'ಶ್ರೀ'ಯವರ 'ಸಮಕಾಲೀನ ಸಾಹಿತ್ಯ ವಿಮರ್ಶೆ' ಮತ್ತು ಸಮಕಾಲೀನ ಸಾಹಿತ್ಯ. ವಿಮರ್ಶಾ ಪರಿಸರಕ್ಕೆ ಸಂಬಂಧಿಸಿದಂತೆ ಮಾತ್ರ ಸಂಕ್ಷಿಪ್ತವಾಗಿ ವಿವೇಚಿಸಲು ಪ್ರಯತ್ನಿಸುತ್ತೇನೆ.

19ನೇ ಶತಮಾನದಲ್ಲಿ ಇಂಗ್ಲಿಷ್ ವಿದ್ಯಾಭ್ಯಾಸದ ಪರಿಣಾಮವಾಗಿ ದೇಶದ ಪ್ರಜ್ಞೆಯಲ್ಲೇ ಆದ ಸ್ಥಿತ್ಯಂತರವು ಹೊಸಗನ್ನಡ ಸಾಹಿತ್ಯ ನಿರ್ಮಿತಿಯನ್ನು ನಿರ್ಣಯಿಸುವ ಪ್ರಧಾನ ಅಂಶವಾಯಿತು. ಈ ಸಂದರ್ಭದಲ್ಲಿ ಸೃಷ್ಟಿಯಾದ ಸಾಹಿತ್ಯ ಸಾಹಿತ್ಯವಾಗಿಯೇ ಹೊಸ ಸ್ವರೂಪವನ್ನು ಪಡೆಯಿತು. ವ್ಯವಸ್ಥಿತವಾದ ಸಾಹಿತ್ಯ ಅಧ್ಯಯನದ ಶಿಸ್ತಿನಲ್ಲಿ ಸಾಹಿತ್ಯಸೃಷ್ಟಿ, ಸಾಹಿತ್ಯ ವಿಮರ್ಶೆ ಮತ್ತು ಸಂಶೋಧನೆ ಮೂರೂ ಒಟ್ಟಿಗೆ ಭರದಿಂದ ನಡೆದವು. ಗ್ರಂಥ ಸಂಪಾದನೆ, ಶಾಸನ, ಜಾನಪದ ಸಂಗ್ರಹಣೆ. ವ್ಯಾಕರಣ. ನಿಘಂಟು ರಚನೆ, ಸಾಹಿತ್ಯ ಚರಿತ್ರೆ, ಭಾಷಾಂತರ ಕ್ರಿಯೆ ಮೊದಲಾದುವು 19ನೇ ಶತಮಾನದ ಪೂರ್ವಾರ್ಧದ ಸಾಹಿತ್ಯ ಅಧ್ಯಯನದ ಚಟುವಟಿಕೆಗಳಾದವು. ಕನ್ನಡ ನವೋದಯ ಸಾಹಿತ್ಯ ಮತ್ತು ವಿಮರ್ಶೆಯ ಪ್ರಧಾನ ಪ್ರೇರಣೆ ಮತ್ತು ಧೋರಣೆಯನ್ನು ರೂಪಿಸುವಲ್ಲಿ ಸಾಹಿತ್ಯ ಅಧ್ಯಯನದ ಪ್ರಾರಂಭಿಕ ಪ್ರಯತ್ನಗಳು ಕಾರಣವಾಗಿವೆ. 19ನೇ ಶತಮಾನದ ಉತ್ತರಾರ್ಧ ಹಾಗೂ 20ನೇ ಶತಮಾನದ ಪೂರ್ವಾರ್ಧವನ್ನು ವಿಮರ್ಶಕರು ಈಗಾಗಲೇ "ಕ್ರಿಯಾತ್ಮಕ ಕಾಲ, ವಿಮರ್ಶಾತ್ಮಕ ಕಾಲವಲ್ಲ" ಎಂದು ಗುರುತಿಸಿದ್ದಾರೆ. ಆದರೆ ಈ ಅವಧಿಯ ಲೇಖಕರು ತಮ್ಮ ಕಾಲದ ಸ್ಥಿತ್ಯಂತರ ಬಿಂದುವಿನಲ್ಲಿ ನಿರ್ದಿಷ್ಟ ಸಾಹಿತ್ಯ ಚಟುವಟಿಕೆಗಳನ್ನು ಮಾತ್ರ ಆಯ್ಕೆ ಮಾಡಿಕೊಳ್ಳುವ ಅವಕಾಶವನ್ನು, ಅನುಕೂಲವನ್ನು ಹೊಂದಿರಲಿಲ್ಲ. ಕನ್ನಡದ, ಕನ್ನಡಿಗರ ಅಳಿವು ಉಳಿವಿನ ಮೂಲಭೂತ ಸಮಸ್ಯೆಯಿಂದ ಹಿಡಿದು, ಕನ್ನಡದ ಬೆಳವಣಿಗೆಯ ದೂರನೋಟದವರೆಗೂ ನವೋದಯ ಸಾಹಿತಿಗಳು, ಲೇಖಕರು ಎದುರಿಸಬೇಕಾದ ಸವಾಲುಗಳ ರಾಶಿ ಬೆಟ್ಟದಷ್ಟಿತ್ತು. ಈ ಸವಾಲನ್ನು ನಮ್ಮ ಕನ್ನಡ ಸಾಹಿತಿಗಳು ಸ್ವೀಕರಿಸಿದ ಬಗೆ, ಕಾರ್ಯಪ್ರವೃತ್ತರಾದ ರೀತಿ, ಗಳಿಸಿದ ಯಶ, ಇತ್ಯಾದಿ ವಿವರಗಳು ಈಗಾಗಲೇ ವಿವೇಚನೆಗೊಳಗಾಗಿವೆ. ಆದಕಾರಣ, 'ಶ್ರೀ'ಯವರನ್ನು ಪ್ರಧಾನವಾಗಿರಿಸಿಕೊಂಡು, ಅವರ ಸುತ್ತಲಿನ ವಿಮರ್ಶಾ ಚಟುವಟಿಕೆಗಳು ರೂಪುಗೊಂಡ ಸ್ವರೂಪವನ್ನು ವಿವರಿಸುವುದು ನನ್ನ ಉದ್ದೇಶ.

ಸಾಹಿತ್ಯ ಸೃಷ್ಟಿ ಮತ್ತು ಸಾಹಿತ್ಯ ಸಂವಹನ—ಎರಡೂ ನೆಲೆಗಳಲ್ಲಿ ಉಂಟಾದ ಬದಲಾವಣೆಯು ಸಾಹಿತ್ಯ ವಿಮರ್ಶೆಯಲ್ಲೂ ಬದಲಾವಣೆಯನ್ನುಂಟು ಮಾಡಿತು. ಸಭಾ ಪಂಡಿತರ ಅಪೇಕ್ಷೆಯ ಚೌಕಟ್ಟು, ಕಾವ್ಯದ ಬಗೆಗೆ ಇರುವ ಧಾರ್ಮಿಕ ಕಲ್ಪನೆಗಳ ಹಿಡಿತದಿಂದ ಮೆಲ್ಲಗೆ ಕಳಚಿಕೊಂಡ ಮುಕ್ತ ಸಾಹಿತ್ಯಕ ವಾತಾವರಣವನ್ನು ರೂಪಿಸುವಲ್ಲಿ ಪಾಶ್ಚಾತ್ಯ ಕಾವ್ಯ ಚಿಂತನೆಗಳು ಪ್ರಭಾವ ಬೀರಿದವು. ಕವಿ—ವಾಕ್ಯ ಸಂದರ್ಭದಲ್ಲಿಯ ಧೋರಣೆಯು ಬದಲಾದ ಕಾರಣವನ್ನು ನಾವು ನವೋದಯ ಸಾಹಿತ್ಯದೃಷ್ಟಿ ಹೆಚ್ಚು ಜನಸಮ್ಮುಖತ್ವವನ್ನು ಪಡೆದುದರಲ್ಲಿ ಗುರುತಿಸಬಹುದು. ಇಲ್ಲಿ ಕವಿಯೂ ಒಬ್ಬ ಸಾಮಾನ್ಯ ಮನುಷ್ಯ. ಆದರೆ

